# ಕುಮುದಿನಿ ಹಾಗೂ ಇತರ ಕಾದಂ-ಕಥನಗಳು

ಶ್ರೀನಿವಾಸ ಹಾವನೂರ

ಅನನ್ಯ ಪ್ರಕಾಶನ
ಶ್ರೀದೇವಿ ನಗರ ವಿದ್ಯಾಗಿರಿ ಧಾರವಾಡ

# ಕುಮುದಿನಿ

ಹಾಗೂ

# ಇತರ ಕಾದಂಕಥನಗಳು

ಕೆಲವು ವಿಶ್ವವಿಖ್ಯಾತ ಕಾದಂಬರಿಗಳ ಸಾರಸರ್ವಸ್ವ

( ಕನ್ನಡ, ಇಂಗ್ಲಿಶ್, ಮರಾಠೀ ಮತ್ತು ಬಂಗಾಲೀ )

ಸಂಗ್ರಹ

ಡಾ. ಶ್ರೀನಿವಾಸ ಹಾವನೂರ

ಅನನ್ಯ ಪ್ರಕಾಶನ

ಶೆಟ್ಟರ ಕಾಲನಿ, ಧಾರವಾಡ – ೫೮೦ ೦೦೪

KUMUDINI HAGOO ITARA KADAMKATHANAGALU
Summaries of Some Great Masterpiece Novels
[ Kannada, English, Marathi and Bengali ]

By Dr. Shrinivas K. Havanur, M.A., M.Lib. Sc., Ph.D.
Professor and Head
University Department of Kannada
University of Bombay
Vidyanagari, Bombay - 400 098



Published in 1984 by
ANANYA PRAKASHANA
Shettar Colony, Dharwad - 580 004

**Price : Rs. 12/-**

ಕುಮುದಿನಿ ಹಾಗೂ ಇತರ ಕಾದಂಕಥನಗಳು
ಸಂಗ್ರಹ : ಡಾ. ಶ್ರೀನಿವಾಸ ಹಾವನೂರ
ಪ್ರಕಾಶನ : ಶೆಟ್ಟರ ಕಾಲನಿ, ಧಾರವಾಡ – ೫೮೦ ೦೦೪
ಮುದ್ರಣ : ಮನೋಹರ ಮುದ್ರಣಾಲಯ, ಧಾರವಾಡ – ೫೮೦ ೦೦೧
ಬೆಲೆ : ರೂ. ೧೨/–

ಅ ರ್ಪ ಣೆ

ನನ್ನ ತಂದೆ

ಶ್ರೀ. ಗಲಗಲಿ ನರಸಿಂಹಾಚಾರ್ಯರಿಗೆ

—ಶ್ರೀ. ಹಾ.

## ಒಂದೆರಡು ಮಾತು–

ಇದು ನನ್ನ ಕಾದಂಕಥನಗಳ ದ್ವಿತೀಯ ಸಂಗ್ರಹ. ಮೊದಲನೆಯದಾದ 'ಮಾತಂಗಿ ಮತ್ತು ಇತರ...' ಸಂಗ್ರಹಕ್ಕೆ (೧೯೮೨) ದೊರೆತ ಯಶಸ್ಸಿನಿಂದ ಇದು ಪ್ರೇರಿತ.

'ಕಾದಂ–ಕಥನ' ಎಂದರೇನು ? ಮೊದಲ ಸಂಗ್ರಹಕ್ಕೆಂದು ಕೊಟ್ಟ ವಿವರಣೆ ಇಲ್ಲಿಯೂ ಪ್ರಸ್ತುತ:

"ಇದು ಕಾದಂಬರಿಯ ಡೈಜೆಸ್ಟ್ ಅಥವಾ ಸಾರಾಂಶವಲ್ಲ. ಇಂಗ್ಲಿಶ್‌ನಲ್ಲಿಯ ಮ್ಯಾಕ್ಮಿಲನ್ ಸೀರೀಜ್‌ನಂತೆ ಎಳೆಯರಿಗಾಗಿ ಬರೆದ ಕಥಾಸಾರವಲ್ಲ. ಬದಲಾಗಿ ಕಾದಂಬರಿಯೊಂದರ 'ಕತೆಯ ಮೈಗೆಡಲೀಯದೆ' ಅದರ ಕೆಲವು ಹೃದ್ಯವಾದ ಸನ್ನಿವೇಶಗಳನ್ನು ಯಥಾವತ್ತಾಗಿ ಕೊಡುತ್ತ, ಆ ಮೂಲಕ ಹೇಳಲಾದ ಕಥನವಿದು. ಕಾದಂಬರಿ ಕನ್ನಡದ್ದೇ ಇದ್ದಾಗ, ಕಾದಂಬರಿಕಾರನ ನುಡಿಗಟ್ಟನ್ನು ಚಾಚೂ ತಪ್ಪದಂತೆ ಉಳಿಸಿಕೊಳ್ಳಬಹುದು. ಅದರಿಂದ ಮೂಲ ಕೃತಿಯನ್ನೇ ಸಂಕ್ಷೇಪದಲ್ಲಿ ಓದಿದಂತಾಗಿ ರಸಾನುಭವ ಪಡೆಯುವುದು ಸಾಧ್ಯ."

ಜಗತ್ಪ್ರಸಿದ್ಧವಾದ ಸರ್ವೋತ್ಕೃಷ್ಟ ಕಾದಂಬರಿಗಳನ್ನು ಇಷ್ಟೊಂದು ಸುಲಭ–ಸರಳವಾದ ರೀತಿಯಲ್ಲಿ ಪರಿಚಯಿಸಿಕೊಳ್ಳುವ ಮಾರ್ಗ ಬೇರೊಂದಿಲ್ಲ.

ಇದನ್ನು ಪ್ರಕಟಿಸಲು ಮುಂಬಂದ ಅನನ್ಯ ಪ್ರಕಾಶನದ ಹೇಮಾ ಮತ್ತುಸಿದ್ಧಲಿಂಗ ಪಟ್ಟಣಶೆಟ್ಟಿಯವರು ಅನನ್ಯರೇ ಸೈ.

ಅಕ್ಟೋಬರ್ ೧೯೮೪ ಶ್ರೀ. ಹಾ.

# ಪರಿವಿಡಿ

# ಸೂರ್ಯಕಾಂತ

ಇದೊಂದು ಅದ್ಭುತರಮ್ಯ 'ಭಾರತೀಯ' ಕಥೆ. ವಿಚಿತ್ರವೆಂದರೆ ಇದನ್ನು— ಇಂಗ್ಲೀಷಿನಲ್ಲಿ— ಬರೆದವರು ಒಬ್ಬ ಆಂಗ್ಲ ಲೇಖಕರು. ಅನೇಕ ವರ್ಷ ಭಾರತದಲ್ಲಿದ್ದು ಇಲ್ಲಿನ ಕಥೆಗಳ ಜೀವಾಳವನ್ನು ಹೀರಿ ಕೊಂಡು ಅಂಥವೇ ಕಥೆಗಳನ್ನು ಸೊಗಸಾಗಿ ಹೆಣೆಯುವ ಕಲೆಯನ್ನು ಸಾಧಿಸಿದ ಎಫ್. ಡಬ್ಲ್ಯು. ಬೇನ್ (F. W. Bain) ಎಂಬ ಈ ಲೇಖಕರು ಬರೆದ ದಿ ಡಿಜಿಟ್ ಆಫ್ ದ ಮೂನ್ (The Digit of the Moon) ನಿಂದ ಈ ಕಥೆಯನ್ನು ಸಂಗ್ರಹಿಸಿ ಕೊಡಲಾಗಿದೆ.

ಸಾವಿರಾರು ವರುಷಗಳ ಹಿಂದೆ ಸೂರ್ಯಕಾಂತನೆಂಬ ರಾಜನು ಆಳುತ್ತಿದ್ದನು. ಅವನ ರಾಜ್ಯವು ಸಮುದ್ರತೀರದ ವರೆಗೂ ಹಬ್ಬಿತ್ತು. ಅವನ ಬುದ್ಧಿಮತ್ತೆಯು ಎಲ್ಲ ಜ್ಞಾನಸೀಮೆಗಳನ್ನು ದಾಟಿ ಮುಂದೆ ಹೋಗಿದ್ದಿತು. ಆದರೇನು, ಒಂದನ್ನು ಮಾತ್ರ ಅವನು ಪಡೆದಿರಲಿಲ್ಲ; ಒಂದನ್ನು ಮಾತ್ರ ಅವನು ಅರಿತಿರಲಿಲ್ಲ. ಅದೆಂದರೆ ಹೆಣ್ಣು, ಅವಳ ಪ್ರೇಮ.

ಸ್ವತಃ ಅವನು ಸುಂದರನೂ ಗುಣಸಂಪನ್ನನೂ ಆಗಿದ್ದು, ತನ್ನ ಕೀರ್ತಿ ಕಿರಣಗಳಿಂದ ಸಮಸ್ತ ವನಿತೆಯರ ಹೃದಯಭೇದಕನಂತೆ ಇದ್ದರೂ, ತನ್ನ ಮಟ್ಟಿಗೆ ಮಾತ್ರ ಈ ವಿಷಯದಲ್ಲಿ ನಿರ್ಲಿಪ್ತನಿದ್ದನು. ಯಾವ ಕಾಮಾಕ್ಷಿಯ ಕ್ರೂರ ಕಟಾಕ್ಷವೂ ಅವನ ಶೀತಲ ಹೃದಯವನ್ನು ಬಡಿದೆಬ್ಬಿಸಲು ಸಮರ್ಥವಾಗಿರಲಿಲ್ಲ.

ದಿನಗಳು ಕಳೆದ ಹಾಗೆ ಅವನ ಮಂತ್ರಿಗಳಿಗೆ ಯೋಚನೆಯಾಯಿತು. ರಾಜನಿಗೆ ಮದುವೆಯಾಗದೆ, ಗಂಡು ಸಂತಾನವಾಗದೆ, ರಾಜ್ಯ-ಶಕಟ ಮುಂದೆ ಸಾಗುವುದೆಂತು ? ಕೊನೆಗೆ ತಮ್ಮಲ್ಲಿಯೆ ಆಪ್ತಾಲೋಚನೆ ನಡೆಸಿದರು. ಅವರ ಯತ್ನದ ಫಲವಾಗಿ, ನೂರಾರು ಸುಂದರತಮ ಸ್ತ್ರೀಯರು ತಮ್ಮ ಹಾವಭಾವ ಗಳಿಂದ, ನಯ-ಅನುನಯಗಳಿಂದ ರಾಜನ ಮನಸ್ಸನ್ನು ಆಕರ್ಷಿಸಲು, ಪ್ರಚೋದಿಸಲು ಪ್ರಯತ್ನಿಸಿದರು. ಜಗತ್ತಿನ ಸಮಸ್ತ ಸೌಂದರ್ಯವೇ

ಘನೀಭೂತವಾಗಿ ಅವನ ಮನದ ಮೇಲೆ ಸುರಿದರೂ ಏನೂ ಪ್ರಯೋಜನವಾಗಲಿಲ್ಲ.

ಮಂತ್ರಿಗಳು ವಿಮಂಚನೆಗೊಳಗಾದರು. ಮಂತ್ರಿ ಆಪ್ತಾಲೋಚನೆಯಲ್ಲಿ ತೊಡಗಿದರು. ಸದ್ಗುಣಬಹುಳತೆಯೂ ಒಮ್ಮೊಮ್ಮೆ ದುರ್ಗುಣವಾಗಬಲ್ಲುದು. ಸ್ತ್ರೀಯರ ಮಾಯೆಯಿಂದ ರಾಜನು ದೂರವಿರುವುದೇನೊ ಒಳ್ಳೆಯದೇ. ಆದರೆ ಈತ ಸ್ತ್ರೀದ್ವೇಷಿಯಂತೆ ವರ್ತಿಸುವುದು ಒಳ್ಳೆಯದಲ್ಲ; ಈ ರೀತಿಯಾದರೆ ರಾಜ್ಯವೇ ಮಣ್ಣಾಗಿಹೋಗುವುದು ! ಆದುದರಿಂದ ಎಲ್ಲರೂ ಸೇರಿ ರಾಜನ ಮುಂದೆ ನಿಂತುಕೊಂಡು ಈ ವಿಷಯದಲ್ಲಿ ವಿನಂತಿಸಿದರು. ಬಹುಪರಿಯಿಂದ ಮನವೊಲಿಸಿನೋಡಿದರು. ಊಂಹು ! ರಾಜನು ಒಪ್ಪಲೇ ಇಲ್ಲ.

ಕೊನೆಗೆ ಮಂತ್ರಿಸಂಪುಟವು ಬೇರೊಂದು ಉಪಾಯವನ್ನು ಯೋಚಿಸಿತು. ರಾಜನ ಮನಸ್ಸನ್ನು ತಿರುಗಿಸುವವರಿಗೆ ಒಂದು ಕೋಟಿ ಮೊಹರುಗಳನ್ನು ಕೊಡುವುದಾಗಿ, ಗುಪ್ತಚಾರರ ಮೂಲಕ, ರಾಜನಿಗೆ ಅರಿಯದಂತೆ ಪ್ರಕಟಪಡಿಸಿದರು. ಅದರಿಂದಾಗಿ ರಂಭೆ, ಊರ್ವಶಿ, ಮೇನಕೆಯರನ್ನು ಮೀರಿಸುವ ಲಾವಣ್ಯವತಿಯರು ರಾಜನ ಬಳಿ ಸುತ್ತಿ ಸುಳಿದಾಡಿದರು. ಆದರೆ ಅದರಿಂದ ರಾಜನ ಹೃದಯಪರಿವರ್ತನೆಯು ಬದಲಾಗಿ, ಅನಾದರವು ಹೆಚ್ಚತೊಡಗಿತು. ತನ್ನ ಕಣ್ಣಿಗೆ ಬೀಳುವ ಎಲ್ಲ ಸ್ತ್ರೀಯರನ್ನೂ ರಾಜ್ಯ ಬಿಟ್ಟು ಓಡಿಸುವೆನೆಂದು ಬೆದರಿಸಿದನು. ಅದರಿಂದ ಮಂತ್ರಿಗಳು ರಾಜನು ಹೊರಗೆ ಹೊರಟಾಗ ಯಾವ ಸ್ತ್ರೀಯೂ ಅವನ ಕಣ್ಣಿಗೆ ಬೀಳದಂತೆ ದೂತರನ್ನು ಮುಂದಾಗಿ ಕಳಿಸಿ ವ್ಯವಸ್ಥೆ ಮಾಡಿಸುವ ಪ್ರಸಂಗ ಬಂದಿತು. ರಾಜನ ಮನಸ್ಸಿಗೆ ಇದರಿಂದ ನೆಮ್ಮದಿಯೇನೊ ಸಿಕ್ಕಿತು. ಆದರೆ ನೂರಾರು ಪ್ರಮದೆಯರು ಮನ್ಮಥನ ಪ್ರತಿಮೂರ್ತಿಯಂತಿದ್ದ ಆ ರಾಜನನ್ನು ಒಮ್ಮೆಯಾದರೂ ನೋಡಿ ತಮ್ಮ ನೊಂದ ಹೃದಯವನ್ನು ಸಂತೈಸಿಕೊಳ್ಳಲು, ರಾಜದಂಡನೆಯನ್ನು ತಿಳಿದೂ ತಿಳಿದೂ ಆ 'ಲೋಹಕಾಂತದತ್ತ' ಧಾವಿಸುತ್ತಿದ್ದರು !

ಹೀಗಿರುತ್ತಿರಲು ಒಂದು ದಿನ ರಾಜಧಾನಿಗೆ ಒರ್ವ ಚಿತ್ರಕಾರನು ಬಂದನು. ಬಂದವನೇ ಆ ನಗರದಲ್ಲಿ ನೋಡತಕ್ಕಂತಹದೇನೇನಿದೆ ಎಂದು ವಿಚಾರಿಸಿದನು. ಆಗ ಜನರು, ಈ ನಗರದಲ್ಲಿ ನೋಡತಕ್ಕಂತಹ ಆಶ್ಚರ್ಯಕರ ವಸ್ತುವೆಂದರೆ

ಸೂರ್ಯಕಾಂತ— ನಮ್ಮ ರಾಜನೇ ಎಂದು ಹೇಳಿದರು; ಮಕರಧ್ವಜನಾದ ಕಾಮನ ಪಂಚಬಾಣಗಳ ಜೊತೆಗೆ ಆರನೆಯುವನಂತಿದ್ದ ಅವನು ಸ್ವತಃ ಸ್ತ್ರೀವಿಮುಖನಾಗಿರುವ ವಿಷಯುವನ್ನು ಆ ಚಿತ್ರಕಾರನಿಗೆ ವಿಶದಪಡಿಸಿದರು.

ಆ ಮಾತನ್ನು ಕೇಳಿ ಚಿತ್ರಕಾರನು ಮನವಾರೆ ನಕ್ಕನು. "ಸೂರ್ಯನು ಶಾಖ ಕೊಡುವುದನ್ನೂ ಗಾಳಿಯು ಬೀಸುವುದನ್ನೂ ಬಿಟ್ಟುಕೊಡಬಲ್ಲುದೆ ? ಇರಲಿ, ರಾಜನ— ಈ ಸೂರ್ಯಕಾಂತನ ಹೃದಯುವನ್ನು ಚುರುಕುಗೊಳಿಸಲು, ನನ್ನಲ್ಲಿ ಸೂರ್ಯನೋಪಾದಿಯಾದ ಒಂದು ಸಾಧನವುಂಟು" ಎಂದು ನುಡಿದನು.

ಗುಪ್ತಚಾರರ ಮೂಲಕ ಮಂತ್ರಿಗಳ ಕಿವಿಗೆ ಈ ಸಂಗತಿ ಬೀಳಲು ಅವರು ಆತುರದಿಂದ ಅವನನ್ನು ಕರೆಯಿಸಿ ಕೇಳಿದರು. ಆಗ ಆ ಚಿತ್ರಕಾರನು "ರಾಜನು ನನ್ನನ್ನು ಕರೆಯಿಸುವಂತೆ ಮಾಡಿರಿ, ಮುಂದಿನ ಕಾರ್ಯಭಾರವನ್ನು ನನಗೆ ಬಿಡಿರಿ" ಎಂದು ಹೇಳಿದನು.

ಮಂತ್ರಿಗಳು ರಾಜನ ಬಳಿಗೆ ಹೋಗಿ, ದೇಶವಿದೇಶಗಳನ್ನು ಸುತ್ತಾಡಿ ಬಂದ ಓರ್ವ ಮಹಾಕಲಾವಿದನು ನಗರಕ್ಕೆ ಬಂದಿದ್ದಾನೆಂದು ನಿವೇದಿಸಿದರು. ಆ ಮಾತನ್ನು ಕೇಳಿ ರಾಜನಿಗೆ ಅತೀವ ಸಂತೋಷವಾಯಿತು. ಸ್ವತಃ ಅವನು ಚಿತ್ರ ಮತ್ತು ಇತರ ಕಲೆಗಳಲ್ಲಿ ಪಾರಂಗತನೇ ಇದ್ದನಲ್ಲವೆ? ರಾಜನು ಆ ಚಿತ್ರಕಾರನನ್ನು ಅರಮನೆಗೆ ಕರೆಯಿಸಿಕೊಂಡನು.

ಚಿತ್ರಕಾರನು ಬಂದು ರಾಜನ ರೂಪಾತಿಶಯುವನ್ನು ಕಂಡು ದಂಗು ಬಡಿದನು. "ಮಹಾರಾಜಾ, ಇಷ್ಟು ದಿನಗಳ ಅಖಂಡ ಉದ್ಯಮದ ನಂತರ, ಇಂದು ನನ್ನ ಜನ್ಮ ಹಾಗೂ ನನ್ನ ಕಲೆಯು ಸಾರ್ಥಕವಾಯಿತು. ತಮ್ಮ ಚಿತ್ರವನ್ನು ತೆಗೆಯಲು, ಸಮ್ಮತಿಸುವ ಕೃಪೆಯಾಗಬೇಕು" ಎಂದನು.

ಆಗ ರಾಜನು "ಈ ವರೆಗೆ ನೀನು ತೆಗೆದ ಚಿತ್ರಗಳನ್ನು ತೋರಿಸು. ಆದರೆ ಜೋಕೆ ! ಹೆಂಗಸರ ಚಿತ್ರವನ್ನು ತೋರಿಸೀಯೆ, ಇಲ್ಲವಾದರೆ ನಿನ್ನ ಗತಿ ನೆಟ್ಟಗಾಗಲಿಕ್ಕಿಲ್ಲ" ಎಂದನು. ಚಿತ್ರಕಾರನು ತನ್ನ ಎಲ್ಲ ಕಲಾಕೃತಿಗಳನ್ನು ರಾಜನೆದುರು ಸಾದರಪಡಿಸಿದನು. ಆದರೆ ಅವುಗಳ ಮಧ್ಯದಲ್ಲಿ ಓರ್ವ ಅಂಗನೆಯು ಪ್ರತಿಕೃತಿಯನ್ನು ಅಡಗಿಸಿದ್ದನು. ರಾಜನು ಒಂದೊಂದೇ ಚಿತ್ರ

ವನ್ನು ತಿರುವಿ ಹಾಕುತ್ತ ಅದನ್ನು ನೋಡಿದನು. ನೋಡಿದ್ದೇ ತಡ, ಮೂರ್ಛೆಹೋದನು.

ಕೂಡಲೇ ಚಿತ್ರಕಾರನು ಗಟ್ಟಿಯಾಗಿ ನಕ್ಕು ಮಂತ್ರಿಗಳಿಗೆ "ನೋಡಿದಿರಾ! ಇನ್ನು ನನ್ನ ಕೆಲಸವಾಯಿತು. ನನ್ನ ಸಂಭಾವನೆಯನ್ನು ಕೊಡುವ ವ್ಯವಸ್ಥೆ ಮಾಡಿರಿ. ಎಚ್ಚರ ಬಂದ ಮೇಲೆ ರಾಜನು ಏನು ಹೇಳುವನೋ ಕೇಳಿರಿ. ಈಗ ನಾನು ಇಲ್ಲಿ ಇರದಿರುವುದೇ ಲೇಸು!" ಎಂದು ನುಡಿದು ಹೊರಗೆ ಹೋದನು.

ಪರಿಜನದ ಶೈತ್ಯೋಪಚಾರಗಳಿಂದ ಎಚ್ಚತ್ತ ರಾಜನು, "ಎಲ್ಲಿ! ಎಲ್ಲಿ, ಆ ಚಿತ್ರಕಾರನು?" ಎಂಬ ಆತುರವನ್ನು ತೋರಲು, ಮಂತ್ರಿಗಳು "ಅವನು ಹೊರಟುಹೋದ" ಎಂದರು. ಆಗ ರಾಜನ ಮುಖವು ಕಪ್ಪಿಟ್ಟಿತು; ದನಿಯು ನಡುಗಿತು. "ಕೂಡಲೇ ಅವನನ್ನು ಕರೆಯಿಸಿರಿ. ಅವನು ಊರನ್ನೇ ಬಿಟ್ಟು ಕೈಗೆ ಸಿಗದಷ್ಟು ದೂರ ಹೋಗಿದ್ದನಾದರೆ, ನಿಮ್ಮನ್ನು ಸೀಳಿ ಹಾಕುವೆ" ಎಂದು ಅಬ್ಬರಿಸಿದನು.

ಮಂತ್ರಿದೂತರು ಕೂಡಲೇ ಚಿತ್ರಕಾರನನ್ನು ಕರೆತಂದರು. ಅವನು ನಟನೆಯಿಂದ "ಮಹಾಪ್ರಭೋ! ನನ್ನನ್ನು ಕ್ಷಮಿಸಬೇಕು. ನನ್ನ ದುರ್ವಿಧಿಯೇ ರೂಪ ತಾಳಿದಂತೆ, ಅದೊಂದು ಚಿತ್ರವು ಉಳಿದುಕೊಂಡುಬಿಟ್ಟಿತು" ಎಂದನು.

ಆಗ ರಾಜನು, "ಹಾಗಲ್ಲ, ಆ ಚಿತ್ರವನ್ನು ತೋರಿಸಿ ನೀನೇ ನಮ್ಮ ಮೇಲೆ ಮಹದುಪಕಾರವನ್ನು ಮಾಡಿರುವಿ. ಆ ಚಿತ್ರದ ರಮಣಿಯು ಹಿಂದಿನ ಜನ್ಮದಲ್ಲಿ ಖಂಡಿತವಾಗಿಯೂ ನನ್ನ ಹೆಂಡತಿಯೇ ಆಗಿರಬೇಕು. ಅಂತೆಯೇ ನನಗೆ ಆ ಪರಿಯಾಗಿ ಭಾವನೆ ಉಕ್ಕೇರಿ ಸ್ಮೃತಿ ತಪ್ಪಿತು. ಈಗ ಹೇಳು, ಆ ಮೋಹನಾಂಗಿಯು ಎಲ್ಲಿಯವಳು? ಈ ಲೋಕದವಳು ಅಲ್ಲವೆಂದೇ ನನ್ನ ಭಾವನೆ. ಹೀಗಿರುವಾಗ ನೀನು ಯಾವ ದೇಶಾಂತರದಲ್ಲಿ ಅವಳನ್ನು ಕಂಡೆ?" ಎಂದನು.

ಆ ಮಾತಿಗೆ ಚಿತ್ರಕಾರನು ನಸುನಕ್ಕು, "ಮಹಾರಾಜ, ನೀವು ಅವಳನ್ನು ಮರೆತುಬಿಡುವುದೇ ಲೇಸು. ಅವಳು ದುರ್ಲಭಳು. ಅದನ್ನು ಹೇಳಿ ನಿಮ್ಮ ವಿನಾಶಕ್ಕೆ ನಾನು ನಿಮಿತ್ತನಾಗಬಾರದು" ಎಂದನು.

ಆಗ ರಾಜನು ಅವನನ್ನು ಬೆದರಿಸಿ ಒತ್ತಾಯಪಡಿಸಲು, ಚಿತ್ರಕಾರನು ಹೇಳತೊಡಗಿದನು : "ಈ ಚಿತ್ರದ ನಾಯಿಕೆಯು ಹೆಸರು ಅನಂಗರಾಗಿಣಿ ಎಂದು. ನಾಗಕುಲಪ್ರಸೂತಳು. ಆಕೆ ಇಲ್ಲಿಂದ ಎರಡು ತಿಂಗಳುಗಳ ಮಾರ್ಗ ಕ್ರಮಣದಷ್ಟು ದೂರವಿರುವ ಒಂದು ದಟ್ಟಡವಿಯಲ್ಲಿ ಅರಮನೆಯೊಂದನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾಳೆ. ಅವಳೆಂಥ ಸೌಂದರ್ಯವತಿಯೆಂಬುದನ್ನು ಹೇಳುವ ಅಗತ್ಯವಿಲ್ಲ. ಯಾರು ಅವಳನ್ನು ಪ್ರತ್ಯಕ್ಷ ನೋಡುತ್ತಾರೆಯೋ, ಆ ಕ್ಷಣಕ್ಕೆಯೆ ಪ್ರೇಮವಶರಾಗುತ್ತಾರೆ. ಕೆಲವರು ಸ್ಮೃತಿ ತಪ್ಪಿ ಬೀಳುತ್ತಾರೆ. ಕೆಲವರು ಪ್ರೇಮೋದ್ವೇಗದಿಂದ ಪ್ರಾಣಕ್ಕೂ ಎರವಾಗಿದ್ದಾರೆ. ಆದರೂ ಅನಂಗರಂಗನ ಯಾವ ಬಾಣವನ್ನೂ ಎದುರಿಸಿ ನಿಲ್ಲುವಷ್ಟು ಅವಳದು ಕಲ್ಲೆದೆಯಾಗಿದೆ. ಇದುವರೆಗೆ ಅನೇಕ ಮಹಾನುಭಾವರು ಅವಳ ಮೇಲಣ ಆಸೆಯಿಂದ, ಮದುವೆ ಮಾಡಿಕೊಳ್ಳಲು ಮುಂದೆ ಬಂದದ್ದಿದೆ. ಆಕೆಯೋ, ಅವರೆಲ್ಲರನ್ನೂ ಮನಸ್ಸಿನಲ್ಲಿ ಕಡೆಗಣಿಸಿ ಬಿಟ್ಟರೂ ಬಂದವರನ್ನು ತನ್ನ ಅತಿಥಿಗೃಹದಲ್ಲಿ ನಿಲ್ಲಿಸಿಕೊಳ್ಳುತ್ತಾಳೆ. ಮದುವೆಯಾಗುವ ಇಷ್ಟವಿದ್ದರೆ ೮ ದಿಸಗಳ ವರೆಗೆ* ಇದ್ದು ಪ್ರತಿದಿನ ಒಂದು ಸಮಸ್ಯಾತ್ಮಕ ಕತೆಯನ್ನು ತನಗೆ ಹೇಳಬೇಕು ಎಂದು ಕರಾರು ಹಾಕುತ್ತಾಳೆ. ಅವರಲ್ಲಿ ಯಾರೊಬ್ಬರು ಹಾಕಿದ ಸಮಸ್ಯೆಗೆ ತನ್ನಿಂದ ಉತ್ತರ ಹೇಳುವುದಾಗದಿದ್ದಲ್ಲಿ ತಾನು ಅವರನ್ನು ವರಿಸುವುದಾಗಿ ಪಣತೊಟ್ಟಿದ್ದಾಳೆ. ಇನ್ನು ಅವಳೇ ಗೆದ್ದರೆ ಸೋತ ಗಂಡಸನ್ನು ತನ್ನ ಆಧೀನದಲ್ಲಿರಿಸಿಕೊಂಡು ತನಗೆ ಬೇಕಾದ ರೀತಿಯಲ್ಲಿ ನಡೆಸಿಕೊಳ್ಳುತ್ತಾಳೆ. ಮಹಾರಾಜ, ಇದುವರೆಗೆ ಯಾರೂ ಅವಳನ್ನು ಸೋಲಿಸಲು ಸಮರ್ಥರಾಗಿಲ್ಲ. ಅವಳ ಬುದ್ಧಿಶಕ್ತಿಯು ಅಲೌಕಿಕವಾದದ್ದಾಗಿದೆ. ಈಗಾಗಲೇ ಸೋತು ಸೆರೆಯಾಳಾದ ಅನೇಕ ವೀರರಲ್ಲಿ, ರಾಜರಲ್ಲಿ ಆಕೆಯು ಹಲವರನ್ನು ಗಡೀಪಾರು ಮಾಡಿದ್ದಾಳೆ. ಕೆಲವರನ್ನು ತನ್ನ ಊಳಿಗಕ್ಕಿಟ್ಟುಕೊಂಡಿದ್ದಾಳೆ. ಅವಳ ರೂಪಾತಿಶಯಕ್ಕೆ ಮರುಳಾಗಿ ಬಂದು, ಕೊನೆಯವರೆಗೂ ತಮಗೆ ದಕ್ಕದೇ ಇರುವ ಅವಳನ್ನು ನೋಡುತ್ತ ದಿನ ನೂಕಬೇಕಾದ ಇಂಥವರ ಜೀವನವು ಅದೆಷ್ಟು ಕರುಣಾಜನಕವಾಗಿದೆ! ಆದುದರಿಂದ ಮಹಾರಾಜ,

* ಮೂಲದಲ್ಲಿ ೨೦ ದಿನಗಳ ಪ್ರಸ್ತಾಪವಿದೆ. ಸಂಗ್ರಹದ ದೃಷ್ಟಿಯಿಂದ ಇಲ್ಲಿ ೮ ಎಂದು ಹೇಳಿದ್ದಿದೆ.

ನಾನು ಇನ್ನೂ ಒಮ್ಮೆ ಬಿನ್ನವಿಸಿಕೊಳ್ಳುವೆ—ನಿಮಗೆ ಅವಳಿಂದ ಕೇಡಾಗುವುದು ಬೇಡ. ಖಂಡಿತ ಅವಳ ಆಸೆಯನ್ನು ತೊರೆದುಬಿಡಿರಿ."

ಆಗ ರಾಜನು ಮನಸ್ವೀ ನಗುತ್ತ "ಎಲೈ ಚಿತ್ರಕಾರನೇ, ನಿನ್ನ ಬುದ್ಧಿಯು ಮಾತ್ರ ನಿನ್ನ ಕಲೆಯಂತೆ ಚುರುಕಾದುದಲ್ಲವೆನ್ನಬೇಕಾಗುತ್ತದೆ. ಒಂದು ವೇಳೆ ನಿನ್ನ ಮಾತೇ ನಿಜವೆಂದು ತಿಳಿದರೂ, ಇಲ್ಲಿ ಕುಳಿತು ಅವಳನ್ನು ನೆನೆನೆನೆದು ದುಃಖಪಡುತ್ತ ಅವಳನ್ನು ಪಡೆಯುವ ಪ್ರಯತ್ನವನ್ನೇ ಬಿಟ್ಟುಕೊಡಲೆ ? ಇರಲಿ" ಎಂದು ಹೇಳಿ, ಅವನಿಗೆ ೩ ಕೋಟಿ ವರಹಗಳನ್ನು ಕೊಡಿಸಿ, ಅವನಿಂದ ಅನಂಗರಾಗಿಣಿಯ ಆ ಪ್ರತಿಕೃತಿಯನ್ನು ಪಡೆದನು. ಮತ್ತು, ತನ್ನ ಚಿತ್ರವನ್ನು ತೆಗೆಯಲು ಅನುಮತಿ ಇತ್ತು, ಅದು ಮುಗಿದ ಮೇಲೆ ಅವನನ್ನು ಕಳಿಸಿ ಕೊಟ್ಟನು. ಮಂತ್ರಿಗಳನ್ನು ಕರೆಯಿಸಿ, ಅಂದೇ ರಾತ್ರಿ ತಾನು, ಅನಂಗ ರಾಗಿಣಿಯನ್ನು ಕಂಡುಬರಲು ಹೊರಡುವ ತನ್ನ ನಿರ್ಧಾರವನ್ನು ಸಾರಿದನು.

ರಾಜನು ತನ್ನ ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ, ಒಬ್ಬನೇ ಹೊರಟು ನಿಂತನು. ಆಗ ಅವನ ಆತ್ಮೀಯ ಗೆಳೆಯನಾದ ರಸಕೋಶನು, "ಇದೇನು, ನೀನೊಬ್ಬನೇ ಹೊರಟೆಯಾ ? ನಿನ್ನ ಸಂಗಡ ನಾನು ಬರದೆ, ಇಲ್ಲಿ ಒಬ್ಬನೇ ಕುಳಿತು ಏನು ಮಾಡಲಿ ? ನಿನ್ನ ಅರ್ಧ ಜೀವವು ಆ ಅನಂಗ ರಾಗಿಣಿಯಲ್ಲಿ ನಿರತವಾಗಿದ್ದರೆ, ಇನ್ನರ್ಧ ಜೀವವು ನನ್ನಲ್ಲಿದೆ ಎಂಬುದನ್ನು ಮರೆಯಬೇಡ" ಎಂದನು.

"ಅಯ್ಯಾ ಮಿತ್ರನೇ, ನೀನೆನ್ನುವುದು ನಿಜ, ಆದರೆ ಸಾವಿನ ದವಡೆಗೆ ನಾನು ಹೊರಟಿರುವಾಗ, ಇನ್ನೊಬ್ಬರಿಗೇಕೆ ತಾಪ- ಕೊಡಲಿ ?" ಎಂದು ರಾಜನು ಹೇಳಿದನು.

ಆಗ ರಸಕೋಶನು, "ವಿಪತ್ತಿನಲ್ಲಿ ನೆರವಾಗದ ಗೆಳೆಯನು ಗೆಳೆಯನೇ ಅಲ್ಲ. ಇಷ್ಟಕ್ಕೂ ಸುಖದಲ್ಲಿ ಕೂಡ ಪಾಲುಗಾರನಾಗಿ ಸ್ನೇಹಿತನು ಬೇಕೇ ಬೇಕು. ಹಾಗಿಲ್ಲದೆ ಸುಖದಲ್ಲಿ ಸ್ವಾರಸ್ಯ ಬರುವುದಿಲ್ಲ" ಎಂದು ನುಡಿದಾಗ, ರಾಜನು ಅವನನ್ನೂ ಸಂಗಡ ಕರೆದುಕೊಂಡು ಹೊರಟನು. ರಾಜನು ಅನಂಗ-ರಾಗಿಣಿಯ ಚಿತ್ರವನ್ನು ಸಂಗಡ ತೆಗೆದುಕೊಂಡು ಪ್ರಯಾಣ ಬೆಳೆಸಿದನು.

ಅವರ ದಾರಿಯು ದಟ್ಟಡವಿಯಲ್ಲಿ ಸಾಗಿದ್ದ ಮೂಲಕ ಸುಗಮವಾಗಿ ಲಿಲ್ಲ. ಆದರೆ ರಾಜನ ಚಿತ್ತವು ಬೇರೆಡೆಗೆ ಇದ್ದುದರಿಂದ ಇದಾವುದರ ಕಡೆಗೆ ಅವನ ಗಮನವಿರಲಿಲ್ಲ. ಎಷ್ಟೋ ದಿನಗಳವರೆಗೆ ಅವನು ಮಾತನ್ನೇ ಆಡಿರ ಲಿಲ್ಲ. ಆಹಾರವನ್ನೂ ತೆಗೆದುಕೊಂಡಿರಲಿಲ್ಲ. ಹೀಗೆ ಎರಡು ತಿಂಗಳ ಕಾಲದ ಮಾರ್ಗಕ್ರಮಣವಾದ ಮೇಲೆ ಆ ನಾಗಕುವರಿಯ ಅರಮನೆಯನ್ನು ತಲು ಪಿದರು.

## ಪ್ರಥಮ ದಿವಸ

ವಿಶಿಷ್ಟವಾದ ಅರಮನೆ, ಅಪರಿಚಿತ ವಾತಾವರಣ, ಅನಂಗರಾಗಿಣಿಯ ಅದ್ಭುತ ವ್ಯಕ್ತಿತ್ವಗಳಿಂದ ಬೆಕ್ಕಸ ಬೆರಗಾಗಿದ್ದ ರಾಜನು, ತನ್ನ ಮಿತ್ರನನ್ನು ಕುರಿತು, "ಮಿತ್ರಾ ! ನನ್ನದೆಲ್ಲ ಮುಗಿಯಿತಿನ್ನು. ನನ್ನ ಮನದನ್ನೆಯ ಕಲ್ಪನೆ ಯಲ್ಲಿಯೇ ಮುಳುಗಿ ಹೋಗಿದ್ದ ನನ್ನಲ್ಲಿ ಅನ್ಯ ವಿಚಾರಕ್ಕೆ ಆಸ್ಪದವೇ ಇರಲಿಲ್ಲ. ಈಗ ನಾನು ಏನೆಂದು ಅವಳಿಗೆ ಸಮಸ್ಯೆಗಳನ್ನೊಡ್ಡಲಿ ? ಅವಳ ಯೋಚ ನೆಯೇ ನನಗಿಷ್ಟು ಗುಂಗು ಹಿಡಿಸಿದ ಮೇಲೆ, ಅವಳ ದರ್ಶನವಾದ ಮೇಲಂತೂ ಪರಿಸ್ಥಿತಿ ಏನಾದೀತೋ !" ಎಂದು ದುಃಖವನ್ನು ತೋಡಿಕೊಂಡನು.

ಆಗ ರಸಕೋಶನು, "ರಾಜನೇ, ಇದುವರೆಗೆ ಎಲ್ಲ ರಾಜಪುತ್ರರ ಹಣೆ ಬರೆಹ ಆದದ್ದೇ ಹೀಗೆಂದು ತೋರುತ್ತದೆ. ಅವಳ ರೂಪಾತಿಶಯವು ಅವ ರೆಲ್ಲರ ಬುದ್ಧಿಶಕ್ತಿಯನ್ನು ಮಂದಗೊಳಿಸಿತೆಂಬೇ ಅವರು ಅದಕ್ಕೆ ಬಲಿಬಿದ್ದರು. ಆದರೆ ನೀನು ಚಿಂತಿಸಬೇಡ. ಒಂದು ಕೆಲಸ ಮಾಡು, ನಿನ್ನ ಪರವಾಗಿ ನಾನು– ನಿನ್ನ ಗೆಳೆಯ ಮಾತನಾಡುತ್ತೇನೆಂದು ಅವಳಿಗೆ ತಿಳಿಸಿಬಿಡು. ಮುಂದಿನದರ ಹೊರೆ ನನ್ನ ಮೇಲಿರಲಿ" ಎಂದನು. ಆ ಮಾತು ಕೇಳಿ ರಾಜನಿಗೆ ಪರಮಾನಂದ ವಾಯಿತು. ತನ್ನ ಪ್ರೇಯಸಿಯ ಧ್ಯಾನರತನಾಗುವುದಕ್ಕೆ ಈಗ ಅವ ಆತಂಕವೂ ಉಳಿಯಲಿಲ್ಲ.

ತನ್ನ ಪಾಣಿಗ್ರಹಣಕ್ಕಾಗಿ ಸೂರ್ಯಕಾಂತನೆಂಬ ರಾಜನು ಬಂದಿರುವ ನೆಂಬುದನ್ನು ದೂತರಿಂದ ಕೇಳಿ ತಿಳಿದು, ಅನಂಗರಾಗಿಣಿಯು ತನ್ನ ಕ್ರೀಡೋ- ದ್ಯಾನದ ಆಮೋದಹರ್ಮ್ಯದಲ್ಲಿ ಅವನನ್ನು ಬರಮಾಡಿಕೊಂಡಳು. ಏನು

ಆ ಹರ್ಮ್ಯದ ರಮ್ಯ ಸುಂದರ ನೋಟ ! ರಾಗಿಣಿಯು ಬಂಗಾರದ ಹಂಸಾ-ಸನದ ಮೇಲೆ ಕುಳಿತಿದ್ದಳು. ಸಮುದ್ರಮಥನದಿಂದ ಹೊರಬಂದ ಲಕ್ಷ್ಮಿಯಂತೆ ತೋರುತ್ತಿದ್ದಳು. ಅವಳ ಮುಖಕಾಂತಿಯೊಡನೆ ಸ್ಪರ್ಧಿಸುತ್ತಿದ್ದ ಅವಳಾ ಕಣ್ಣುಗಳ ಹೊಳಪು, ನೋಡುವವರ ಕಣ್ಣನ್ನು ಕುಕ್ಕಿಸುತ್ತಿತ್ತು. ಅವಳ ವಕ್ಷಃಸ್ಥಲದಿಂದ ಗಂಧದ ಸುವಾಸನೆ ಸೂಸುತ್ತಿತ್ತು. ಬಂಗಾರವೇ ನಾಗರೂಪದಿಂದ ವೈವೆತ್ತು ಬಂದಂತೆ, ಒಂದು ಸರ್ಪ ವಿಶೇಷವು ಅವಳ ಕಟಿ ಪ್ರದೇಶವನ್ನು ಬಳಸಿಕೊಂಡಿದ್ದಿತ್ತು. ಅರೆದೆರೆದ ಮೊಳಕಾಲ್ಗಳು ತಿಲಕ ಕಸ್ತೂರಿಗಳ ಲೇಪನದಿಂದ ಆವೃತವಾಗಿದ್ದವು. ಅವಳು ಕುಳಿತಿದ್ದ ಬಿಂಕದ ಠೀವಿಯೊಂದೇ ರಾಜನ ಪಂಚೇಂದ್ರಿಯಗಳನ್ನೂ ಸುಪ್ತಗೊಳಿಸುವುದಕ್ಕೆ ಸಾಕಾಯಿತು.

ಅನಂಗರಾಣಿಯು ರಾಜನತ್ತ ಒಮ್ಮೆ ತಿರಸ್ಕಾರದ ನೋಟವನ್ನು ಬೀರಿ, "ಏನು ಕೇಳುವುದಿದೆ ಕೇಳಬೇಕು" ಎಂದು ಹೇಳಿ ಮುಖವನ್ನು ಹೊರಳಿಸಿದಳು.

ಆಗ ರಸಕೋಶನು ಮುಂದೆ ಬಂದು ವಂದಿಸಿ, "ದೇವಿಯೆ, ನಾನು ಈ ಮಹಾರಾಜನ ವಕ್ತಾರನು, ನಮ್ಮ ದೊರೆ ನಿಮ್ಮೊಂದಿಗೆ ಮಾತನಾಡಲು ಅಪ್ಪಣೆ ಕೊಡಿಸಿದ್ದಾನೆ. ಇದಕ್ಕೆ ಅನುಮತಿ ಇದೆಯಷ್ಟೆ" ಎಂದನು. ಯಾರಾದರೇನಂತೆ ಎಂಬ ಭಾವದಿಂದ ಆಕೆ ಅದಕ್ಕೆ ಸಮ್ಮತಿಸಿದುದರ ಸಂಜ್ಞೆ ಮಾಡಿದಳು. ಆಗ ರಸಕೋಶನು ಹೇಳತೊಡಗಿದನು :

"ದೇವೀ, ಹಿಂದಕ್ಕೆ ಧರ್ಮಾಸನವೆಂಬ ರಾಜ್ಯದಲ್ಲಿ ಓರ್ವ ಬ್ರಾಹ್ಮಣ ನಿದ್ದನು. ಅವನಿಗೆ ಮೂವರು ಮಕ್ಕಳು. ಅವನ ಇಳಿ ವಯಸ್ಸಿನ ಕಾಲಕ್ಕೆ ಅವನ ಬಳಿ ಹತ್ತೊಂಬತ್ತು ಆಕಳುಗಳಲ್ಲದೆ ಇನ್ನೇನೂ ಇರಲಿಲ್ಲ. ಸಾಯುವ ಕಾಲ ಸನ್ನಿಹಿತವಾದಾಗ ಅವನು ತನ್ನ ಮೂವರೂ ಮಕ್ಕಳನ್ನು ಕರೆದು ಹೇಳಿದುದೇನೆಂದರೆ : 'ನನ್ನಲ್ಲಿ ಈ ಆಕಳುಗಳಷ್ಟೇ ಇವೆ. ನಿಮ್ಮೊಳಗೆ ಇವನ್ನು ಹಂಚಿಕೊಳ್ಳಿರಿ. ಹಿರಿಯವನು ಅವುಗಳಲ್ಲಿ ಸರಿ ಅರ್ಧ ತೆಗೆದುಕೊಳ್ಳಲಿ, ನಡುವಿನವನು ಕಾಲುಪಾಲು ತೆಗೆದುಕೊಳ್ಳಲಿ. ಕೊನೆಯವನಿಗೆ ಒಟ್ಟಿನ ಒಂದು ಐದಂಶ ಪಾಲು ಸಲ್ಲಲಿ. ಇಷ್ಟಾಗಿ ಏನಾದರೂ ಉಳಿದರೆ ಅದನ್ನು ತಿಂದು ಹಾಕಿರಿ. ಇದಾಗದಿದ್ದರೆ ಎಲ್ಲ ಆಕಳುಗಳನ್ನು ರಾಜಭಂಡಾರಕ್ಕೆ ಒಪ್ಪಿಸಿಬಿಡಿರಿ. ಈ ನನ್ನ ಅಂತಿಮ ಆಸೆಗಳನ್ನು ನೀವು ಪೂರೈಸದಿದ್ದರೆ ಖಂಡಿತ ನನ್ನ ಶಾಪವು ನಿಮಗೆ ತಟ್ಟುತ್ತದೆ....' ಎಂದನು.

ಕೆಲವು ದಿನಗಳ ನಂತರ ಆ ಬ್ರಾಹ್ಮಣನು ತೀರಿಕೊಂಡನು. ಮಕ್ಕಳು ಅಪರಕರ್ಮಗಳನ್ನೆಲ್ಲ ಮುಗಿಸಿ, ಆ ೧೯ ಆಕಳುಗಳನ್ನು ಹಂಚಿಕೊಳ್ಳಲು ಉದ್ಯುಕ್ತರಾದರು. ಹಿರಿಯವನೆಂದ– "ನನ್ನ ಅರ್ಧಪಾಲು ಎಂದರೆ ಒಂಬತ್ತೂವರೆ ಆಕಳುಗಳು ಬರಲಿ." ನಡುವಿನವನು ನಾಲ್ಕು ಮೇಲೆ ಮುಕ್ಕಾಲು ಬೇಕು ಎಂದ. ಕಿರಿಯವನಿಗೆ ಅದಕ್ಕೂ ಕೊರೆಯಶಾಯಿತು. —ಎಂದರೆ ಧರ್ಮನಿಷಿದ್ಧವಾದ ಗೋವಧೆಯನ್ನು ಮಾಡಬೇಕಾಗುತ್ತಿತ್ತು. ಮಾಡಿದರೂ ತಂದೆಯ ಆಜ್ಞೆಯ ಪ್ರಕಾರ ಉಳಿದ ಗೋಮಾಂಸ ತಿನ್ನಬೇಕಾಗುತ್ತಿತ್ತು. ಇದು ಅದಕ್ಕಿಂತ ಬಹು ಘೋರ ಪಾಪ-ಕರ್ಮ ! ಗೋವನ್ನು ಪೂಜಿಸುವುದೊತ್ತಟ್ಟಿರಲಿ, ಅವುಗಳ ವಧೆ ಮಾಡುವುದಲ್ಲದೆ ಗೋಮಾಂಸವನ್ನು ಭಕ್ಷಣ ಮಾಡುವುದೆ ? ಆಗ ಮೂವರೂ ಸೋದರರು ಬಹು ಪರಿಯಿಂದ ವಿಚಾರ ಮಾಡಿದರು, ಚರ್ಚಿಸಿದರು. ರಾತ್ರಿ ಮನೆಗೆ ಹೋಗಿ ಒಬ್ಬೊಬ್ಬರೇ ಚಿಂತಿಸಿದರು. ಉತ್ತರ ಹೊಳೆಯಲಿಲ್ಲ. ಈಗ ಹೇಳು ದೇವಿ, ಈ ಸಮಸ್ಯೆಗೆ ಉತ್ತರವನ್ನು."

ಇಷ್ಟು ನುಡಿದು ರಸಕೋಶನು ಸುಮ್ಮನಾದನು. ಅವಳೇನು ಉತ್ತರ ಹೇಳುವಳೊ ಎಂಬುದಾಗಿ ರಾಜನ ಎದೆ ಡವಡವ ಹೊಡೆಯುತ್ತಿತ್ತು. ಆಗ ಅನಂಗರಾಗಿಣಿಯು ಹೇಳಿದಳು : "ಆ ಸೋದರರು ಒಂದು ಆಕಳನ್ನು ಹೊರಗಿನಿಂದ ಕಡವಾಗಿ ತರಲಿ. ಒಟ್ಟಿಗೆ ೨೦ ಆಕಳುಗಳಾಗುವವು. ಹಿರಿಯುವನು ಅವುಗಳ ಅರ್ಧ—ಎಂದರೆ ಹತ್ತನ್ನು ತೆಗೆದುಕೊಳ್ಳಲಿ. ನಡುವಿನವಗೆ ಒಟ್ಟಿನ ಕಾಲು ಪಾಲು ಎಂದರೆ ಐದು ದೊರೆಯುತ್ತವೆ. ಇಪ್ಪತ್ತರ ಐದಾಂಶ ನಾಲ್ಕನ್ನು ಕಿರಿಯನು ಪಡೆಯಲಿ. ಉಳಿದದ್ದು ? ಒಂದೇ ಅಂದರೆ ಆ ಎರವಲಾಗಿ ತಂದ ಆಕಳು. ಅದನ್ನು ಮರಳಿ ಕೊಟ್ಟು ಬಿಡಲಿ. ಇದರಿಂದ ಮೂವರಿಗೂ ತಮಗೆ ಬರುವ ಪಾಲಿಗಿಂತ ಸಮನಾಗಿ ತುಸು ಹೆಚ್ಚೇ ದೊರೆತಂತಾಯಿತು. ಉಳಿದದ್ದನ್ನು ಭಕ್ಷಣ ಮಾಡುವ ಪ್ರಸಂಗ ಬರಲೇ ಬಾರದು. ಧರ್ಮವೂ ಉಳಿಯಿತು. ಪಿತೃವಾಕ್ಯ ಪರಿಪಾಲನೆಯೂ ಆಯಿತು."

ಇಷ್ಟು ಹೇಳಿ, ಆ ನಾಗಪ್ರಭೆಯು ರಾಜನತ್ತ ಇನ್ನೊಮ್ಮೆ ನೋಡಿದಳು. ಮುಂದೆ ಸಾಗಿದಳು. ಅವಳ ಜೊತೆಗೆ ರಾಜನ ಹೃದಯವೂ ಧಾವಿಸಿತು. ರಸಕೋಶನು ರಾಜನನ್ನು ಕರೆದುಕೊಂಡು ತಮ್ಮ ನಿವಾಸಕ್ಕೆ ಮರಳಿದನು.

## ದ್ವಿತೀಯ ದಿವಸ

ಆಗ ರಾಜನು ರಸಕೋಶನನ್ನು ಕುರಿತು, "ಮಿತ್ರನೇ, ಇನ್ನೇನು ಗತಿ ? ನಿನ್ನ ಸಮಸ್ಯೆಗೆ ಆಕೆ ಉತ್ತರ ಹೇಳಿಬಿಟ್ಟಳು. ಅವಳನ್ನು ಬಿಟ್ಟು ನಾನು ಹೇಗೆ ಬದುಕಿರಲಿ ? ಈ ಚಿತ್ರವಿದೆಯೆಂದು ನಾಳಿನ ವರೆಗೆ ಹೇಗೂ ಜೀವ ಹಿಡಿದುಕೊಂಡಿರುವೆ. ಇದು ಚಿತ್ರವಲ್ಲ, ಕನ್ನಡಿ! ತದ್ವತ್ ಅವಳೇ ಇವಳು" ಎನ್ನುತ್ತ ಆ ಚಿತ್ರದಲ್ಲಿಯೆ, ತಲ್ಲೀನನಾಗಿ ರಾತ್ರಿಯನ್ನು ಕಳೆದನು.

ಬೆಳಗಾದ ಕೂಡಲೇ ಮಿತ್ರನೊಡನೆ ನಿವಾಸದ ಮುಂದಿನ ಕೈದೋಟದಲ್ಲಿ ತಿರುಗಾಡುತ್ತ. ಅವಳದೇ ವಿಷಯ ಮಾತಾಡುತ್ತ ಕಾಲ ಕಳೆದನು. ಸೂರ್ಯನು ಅಸ್ತಮಿಸುತ್ತಲೂ ಇಬ್ಬರೂ ಮತ್ತೆ ರಾಣಿಯ ಆಮೋದಹರ್ಮ್ಯಕ್ಕೆ ಬಂದರು. ಸವಸ್ತ್ರಭೂಷಿತಳಾಗಿ ಸಾಲಂಕಾರಪೂರಿತೆಯಾಗಿದ್ದ ಅವಳನ್ನು ನೋಡಿ, ರಾಜನು ತನ್ನ ಆಸನದಲ್ಲಿ ಕುಸಿದು ಕುಳಿತನು. ರಸಕೋಶನು ಮುಂದೆ ಬಂದು ನಮಸ್ಕರಿಸಿ ಕಥೆಯನ್ನು ಆರಂಭಿಸಿದನು :

"ದೇವೀ, ಒಂದಾನೊಂದು ಊರಲ್ಲಿ, ಬಿಂಬ ಮತ್ತು ಪ್ರತಿಬಿಂಬ ಎಂಬ ಇಬ್ಬರು ಅವಳಿ ಜವಳಿ ಸೋದರರಿದ್ದರು. ಇಬ್ಬರೂ ಸಮರೂಪಿಗಳಾಗಿದ್ದರು. ತಿಳಿನೀರಿನಲ್ಲಿ ಮೂಡಿದ ಚಂದ್ರನ ಪ್ರತಿಬಿಂಬವನ್ನು ಆಕಾಶದ ಬಿಂಬದೊಡನೆ ಹೋಲಿಸಿದರೆ, ಹೇಗೆ ಅಭಿನ್ನರೂಪಿಯಾಗಿ ಕಾಣಬೇಕೋ ಹಾಗೆ ಅವರಿಬ್ಬರ ರೂಪಸಾದೃಶ್ಯವಿದ್ದಿತು. ಇಷ್ಟೇ ಅಲ್ಲದೆ, ಅವರ ದನಿ, ನಡತೆ ಇವುಗಳಲ್ಲಿಯೂ ಭೇದವನ್ನು ಕಂಡುಹಿಡಿಯುವುದು ಅಶಕ್ಯವಾಗಿತ್ತು.

ಒಮ್ಮೆ ಆ ಊರಿನ ವಸಂತ ಮಹೋತ್ಸವದ ಕಾಲಕ್ಕೆ ಬಿಂಬನು ಒರ್ವ ಸುಂದರಿಯನ್ನು ನೋಡಿ ಅವಳಲ್ಲಿ ಅನುರಕ್ತನಾದನು. ಪರಸ್ಪರ ನೋಟದಿಂದ ಪಲ್ಲವಿಸಿದ ಅವರ ಸಹಜ ಪ್ರೇಮವು ಮುಂದೆ ಕೂಟದಲ್ಲಿ ಪರಿಣಮಿಸಿತು. ಬಿಂಬನು ವಾರದಲ್ಲಿ ಮೂರು ದಿನ ಅವಳ ಮನೆಗೆ ಹೋಗಿ ಬರುತ್ತಿದ್ದನು. ತನ್ನ ಈ ಪ್ರೇಮಸಂಬಂಧವನ್ನು ಗೌಪ್ಯದಲ್ಲಿ ಇಟ್ಟುಕೊಳ್ಳಲಾಗದೆ ಅವನು ಒಂದು ದಿನ ತನ್ನ ಸೋದರನಿಗೆ ಎಲ್ಲ ಕತೆಯನ್ನು ವಿವರವಾಗಿ ಹೇಳಿದನು. ಮತ್ತು ಒಂದು ಸಲ ಅವಳು ಅವನ ಕಣ್ಣಿಗೆ ಬೀಳುವಂತೆ ಮಾಡಿದನು. ಆ ಸುಂದರಿಗೆ ಈ ವಿಷಯ ತಿಳಿಯದು. ಆದರೆ ಅವಳನ್ನು ಕಂಡೊಡನೆ

ಪ್ರತಿಬಿಂಬನಲ್ಲಿ ಮೋಹ ಜ್ವಾಲೆಯು ಪ್ರಜ್ವಲಿಸಿತು. ಅದನ್ನು ತಡೆದು ಕೊಳ್ಳಲಾಗದೆ, ಬಂಧುತ್ವ, ವಿವೇಕಗಳನ್ನು ತೂರಿ ತಾನೂ ಅವಳ ಕಡೆಗೆ ಉಳಿದ ಮೂರು ದಿನಗಳಲ್ಲಿ ಹೋಗಿಬರತೊಡಗಿದನು. ಬಿಂಬನಂತೆಯೆ ಕಾಣುತ್ತಿದ್ದ ಪ್ರತಿಬಿಂಬನನ್ನು ಆಕೆ ಬೇರೆಯಾಗಿ ಹೇಗೆ ತಿಳಿಯಬಲ್ಲಳು? ಪ್ರತಿಬಿಂಬನನ್ನೂ ಆಕೆಯು ಬರಮಾಡಿಕೊಂಡಳಲ್ಲದೆ, ಮೊದಲಿಗಿಂತ ಇಮ್ಮಡಿ ಯಾಗಿ ತನ್ನ ಪ್ರಿಯಕರನ ಸಮಾಗಮವು ಲಭಿಸಿತೆಂದು ಸಂತಸಪಟ್ಟಳು.

ದಿನಗಳು ಕಳೆದ ಮೇಲೆ ಬಿಂಬನು ತನ್ನ ಒಂದೊಂದು ದಿನಾಂತರದ ವಿರಹವನ್ನು ತಡೆಯಲಾಗದೆ, ಒಂದು ಸಲ ಮಾರುದಿನವೇ ಬಂದನು. ಆದರೆ ಅವನು ಅಲ್ಲಿಗೆ ಬಂದಾಗ ಕಂಡದ್ದೇನು? ಪ್ರತಿಬಿಂಬನು ವಿರಾಮಾಸನದ ಮೇಲೆ ಮಲಗಿದ್ದನು. ತನ್ನ ಪ್ರೇಯಸಿಯು ಅವನಿಗೆ ಭೂರ್ಜ ಪತ್ರದ ಎಲೆಯಿಂದ ಗಾಳಿ ಹಾಕುತ್ತಿದ್ದಳು. ಬಿಂಬನನ್ನು ನೋಡಿದೊಡನೆಯೆ ಆಕೆಯು ಆಶ್ಚರ್ಯಾತಿಶಯದಿಂದ ಚೀರಿದಳು. ಅವಳು ತುಸು ಅಂತರದಲ್ಲಿ ಗರ ಹೊಡೆದವರಂತೆ ನಿಂತಿದ್ದಾಗ, ಬಿಂಬನು ಪ್ರತಿಬಿಂಬನ ಮೇಲೆ ಎರಗಿದನು. ಇಬ್ಬರಿಗೂ ಯುದ್ಧವೆಸಗಿತು. ಅಷ್ಟರಲ್ಲಿ ರಾಜದೂತರು ದಾರಿಯಲ್ಲಿ ಹೊರಟಿದ್ದವರು, ಈ ಗದ್ದಲವನ್ನು ಕೇಳಿ, ಮೂವರನ್ನೂ ಹಿಡಿದುಕೊಂಡು ನ್ಯಾಯಾಧಿಪತಿಯ ಬಳಿಗೆ ಕರೆದೊಯ್ದರು. ಆಗ ಬಿಂಬನು, "ಈತ ನನ್ನ ಬಂಧುವು. ನನ್ನ ಪ್ರೇಯಸಿಯನ್ನು ಅಪಹರಿಸಿದ್ದಾನೆ" ಎಂದನು. ಆಗ ಪ್ರತಿಬಿಂಬನು, "ಇಲ್ಲ, ಇವನೇ ನನ್ನ ಪ್ರೇಯಸಿಯನ್ನು ಅಪಹರಿಸಿ ಭ್ರಾತೃ-ದ್ರೋಹ ಮಾಡಿದ್ದಾನೆ" ಎಂದನು.

ಆಗ ನ್ಯಾಯಾಧಿಪತಿಯು ಆ ಸುಂದರಿಯನ್ನೇ ಕೇಳಿದನು. ಆಕೆಯು ಇಬ್ಬರೆಡೆಗೂ ನೋಡಿದಳು. ಬಿಂಬ, ಪ್ರತಿಬಿಂಬ; ಇವುಗಳಲ್ಲಿ ಭೇದವನ್ನೆಣಿಸ ದಾದಳು. 'ತನ್ನ ನಿಜವಾದ ಪ್ರಿಯಕರನಾರೆಂದು ತಿಳಿಯಲಾರೆ' ಎಂದಳು. ಈಗ ಹೇಳು ದೇವಿ, ನ್ಯಾಯಾಧಿಪತಿಯ ಸಮಸ್ಯೆಗೆ ಉತ್ತರವನ್ನು."

ಇಷ್ಟು ನುಡಿದು ರಸಕೋಶನು ಸುಮ್ಮನಾದನು. ಆಗ ನಾಗಮಣಿಯು ಉತ್ತರಿಸಿದಳು : "ನ್ಯಾಯಾಧಿಪತಿಯು ಮೂವರನ್ನೂ ಪ್ರತ್ಯೇಕ ಪ್ರತ್ಯೇಕ ವಾಗಿ ಕರೆಯಿಸಿ ಅವರಿಂದ ಪ್ರಥಮ ಭೇಟಿಯ ವಿವರಗಳನ್ನು ಕೇಳಲಿ.

ಯಾವ ಎರಡು ವಿವರಣೆಗಳು ಹೊಂದುವವೊ, ಅದು ಸತ್ಯ. ಯಾವ ಸೋದರನದು ಭಿನ್ನವಾಗುವುದೋ ಅದು ಅಸತ್ಯದ್ದು".

ಇಷ್ಟು ಹೇಳಿ ಆ ರಾಜಗುವರಿಯು, ಸೂರ್ಯಕಾಂತನತ್ತ ಕುಡಿಗಣ್ಣ ನೋಟವನ್ನು ಬೀರಿದಳು. ಮುಂದೆ ಸಾಗಿದಳು. ಆಗ ರಾಜನ ಹೃದಯವು ಮತ್ತೆ ಅವಳೆಡೆಗೆ ಧಾವಿಸಿತು. ರಸಕೋಶನು ಬಲುಮೆಯಿಂದ ಮಿತ್ರನನ್ನು ಕರೆದೊಯ್ದನು.

## ತೃತೀಯ ದಿವಸ

ಅರಸನು ರಸಕೋಶನನ್ನು ಕುರಿತು "ಮಿತ್ರನೇ ನನ್ನ ಮನೋಹಾರಿಣಿಯು ಕೂಡಲೇ ನಿನ್ನ ಪ್ರಶ್ನೆಗೆ ಉತ್ತರಿಸಿದಳು. ಎರಡು ದಿನಗಳು ವ್ಯರ್ಥವಾಗಿ ಹೋದವು. ಆದರೂ ಅವಳ ಆ ಕುಡಿಗಣ್ಣಿನ ನೋಟ, ನನ್ನ ಜೀವಕ್ಕೆ ಚೇತೋಹಾರಿಯಾಯಿತೆಂದೇ ಬದುಕಿದ್ದೇನೆ" ಎಂದು ಮರುದಿನದ ವರೆಗೆ ಪ್ರಲಾಪಿಸಿದನು.

ಸಂಜೆಯಾದ ಮೇಲೆ ಇಬ್ಬರೂ ಆಮೋದಹರ್ಮ್ಯಕ್ಕೆ ಬಂದರು. ರಾಣಿಯು ದಿನಕ್ಕೊಂದು ರೀತಿಯಲ್ಲಿ ವೇಷಾಲಂಕಾರದಿಂದ ಭೂಷಿತಳಾಗುವು ದನ್ನು ಗಮನಿಸಿದರು. ರಾಜನು ತೆರೆದ ಬಾಯಿಂದ ಅವಳನ್ನೇ ನೋಡು ತ್ತಿದ್ದಾಗ ರಸಕೋಶನು ಕಥೆಯನ್ನು ಆರಂಭಿಸಿದನು :

ದೇವೀ, ಬಹುದಿನದ ಹಿಂದೆ ಓರ್ವ ರಾಜನಿದ್ದನು. ಅವನಿಗೆ ಮೂವರು ರಾಣಿಯರು. ಚೆಲುವಿಕೆಯಲ್ಲಿ ಮೂವರೂ ಅಪ್ರತಿಮರಾಗಿದ್ದರು. ಒಬ್ಬ ರನ್ನೊಬ್ಬರು ಮೀರಿಸುವಂತಿದ್ದರು. ಬೇಸಗೆಯ ಕಾಲ. ಶುಕ್ಲಪಕ್ಷದ ಒಂದಿರುಳಿನಲ್ಲಿ ಅವನು ತನ್ನ ಅರಮನೆಯ ಮೇಲಣ ಆವಾರದಲ್ಲಿ ತನ್ನ ರಾಣಿಯರೊಡನೆ ಮಲಗಿದ್ದನು. ಬೆಳದಿಂಗಳಿಂದ ಆವೃತವಾದ ಆ ವಾತಾ ವರಣದಲ್ಲಿ ಅವನಿಗೆ ಎಚ್ಚರವಾಯಿತು. ಚಂದ್ರನೆಡೆಗೆ ನೋಡಿದನು. ಮಲ ಗಿದ್ದ ತನ್ನ ರಾಣಿಯರತ್ತ ದೃಷ್ಟಿಯನ್ನು ಹರಿಯಿಸಿದನು. ಈ ನನ್ನ ಮೂವರು ಕಾಂತೆಯರಲ್ಲಿ ಯಾವಳು ಹೆಚ್ಚು ಚೆಲುವೆ ಇರಬಹುದು ಎಂಬ ವಿಚಾರ ಮಾಡಿತು. ತದೇಕಚಿತ್ತನಾಗಿ ನೋಡುತ್ತ ನಿಂತನು. ಮೂವ

ರಲ್ಲಿಯೂ ಒಂದೊಂದು ಬಗೆಯ ಲಾವಣ್ಯ, ತಾನೇ ತಾನಾಗಿ ಮೂಡಿ ನಿಂತಿತ್ತು. ರಾತ್ರಿಯೆಲ್ಲ ವಿಚಾರಿಸಿದರೂ ರಾಜನ ಸಮಸ್ಯೆಗೆ ಉತ್ತರ ದೊರೆಯಲಿಲ್ಲ. ವಿಚಾರಮಾಡಿದಷ್ಟೂ ಅದಕ್ಕೆ ಉತ್ತರ ದೊರಕಿಸಲೇಬೇಕೆಂಬ ಹಟ ಹೆಚ್ಚುತ್ತ ಹೋಯಿತು.

ಬೆಳಗಿನ ರಾಜಸಭೆಗೆ ಮುಂಚೆ, ನಯನೇತ್ರ ಎಂಬ ತನ್ನ ಮಂತ್ರಿಯನ್ನು ತನ್ನ ಆವಾಸದಲ್ಲಿ ಭೆಟ್ಟಿಯಾಗಿ, ಸಭೆಗೆ ಬರುವುದು ಆ ರಾಜನ ಕ್ರಮವಾಗಿದ್ದಿತು. ಮರುದಿನ, ಅವನ ಮಂತ್ರಿಯು ಬಂದು ರಾಜನಿಗೆ ನಮಸ್ಕರಿಸಿ ಕೇಳಿದನು.

"ಮಹಾರಾಜ, ಇಂದೇಕೆ ತಮ್ಮ ಕಣ್ಣುಗಳಲ್ಲಿ ರಾಜರಕ್ತವು ಚಿಮ್ಮಿ ಬಂದಿದೆ ?"

"ನಯನೇತ್ರ, ನಿನ್ನೆ ರಾತ್ರಿ ನನಗೊಂದು ಸಂಶಯ ಮೂಡಿತು. ನನ್ನ ಮೂವರು ರಾಣಿಯರಲ್ಲಿ ಯಾರು ಅತ್ಯಂತ ಚೆಲುವರು, ಎಂದು ರಾತ್ರಿಯೆಲ್ಲ ನಿದ್ರೆಗೆಟ್ಟು ಯೋಚಿಸಿದೆ. ಬಗೆಹರಿಯಲಿಲ್ಲ."

"ಮಹಾರಾಜ. ಇಂಥ ಸಂದೇಹವನ್ನು ಬದಿಗಿರಿಸುವುದೇ ಒಳಿತು. ಸ್ತ್ರೀಸೌಂದರ್ಯಕ್ಕೆ ಸಾದೃಶ್ಯವೆಂಬುದೇ ಸಲ್ಲದು. ಮೂವರೂ ರೂಪ ರಾಣಿಯರೇ ಆಗಿರುವಾಗ ಇದೆಲ್ಲ ಏಕೆ ? ಅನವಶ್ಯಕ ಆಸ್ಥೆಯು ಮಾನಸಿಕ ಶಾಂತಿಯನ್ನು ಕದಡುತ್ತದೆ. ಪರಿಣಾಮ ಕೆಡುತ್ತದೆ" ಎಂದನು.

"ಇಲ್ಲ ನಯನೇತ್ರ, ನಾನು ನಿರ್ಧಾರ ಮಾಡಿದ್ದೇನೆ, ಇದನ್ನು ಬಗೆಹರಿಸಲೇಬೇಕಾಗಿದೆ. ನೀನು ಇದಕ್ಕೆ ಮಾರ್ಗವನ್ನು ಸೂಚಿಸಲೇಬೇಕು."

ರಾಜನ ಈ ಒತ್ತಡವನ್ನು ತಡೆಯುವುದು ಅಶಕ್ಯವೆಂದು ತಿಳಿದು ನಯನೇತ್ರವು ಹೇಳಿದನು : "ಈ ಊರಿಗೆ 'ಕಾಂತಿಗ್ರಹ'ನೆಂಬ ತರುಣ ಕ್ಷತ್ರಿಯನು ಬಂದಿದ್ದಾನೆ. ಸ್ತ್ರೀ ಸೌಂದರ್ಯವನ್ನು ಅಳೆಯುವುದರಲ್ಲಿ ಅವನು ಪ್ರವೀಣನೆಂದು ಗುಪ್ತಚಾರರು ಹೇಳಿದರು. ಅವನನ್ನು ಕರೆಯಿಸಿರಿ. ನೀರು ಬೆರೆಸಿದ ಹಾಲನ್ನು ಹಂಸವೊಂದೇ ಬೇರ್ಪಡಿಸಬಲ್ಲುದು. ಸೌಂದರ್ಯದ ವಿವಿಧ ವಿನ್ಯಾಸಗಳನ್ನು ಅವನೊಬ್ಬನೇ ವಿವರಿಸಬಲ್ಲನು."

ರಾಜನ ಅಪ್ಪಣೆಯಂತೆ ಕಾಂತಿಗ್ರಹನು ಅರಮನೆಗೆ ಬಂದನು. ಇಬ್ಬರೂ ಮಾತನಾಡುತ್ತ ನಿಂತಿರುವಾಗ, ರಾಜನು ತನ್ನ ಮೂವರೂ ಮಂದಗಮನೆಯರು ಹಾಯ್ದು ಹೋಗುವಂತೆ ನಿಯೋಜಿಸಿದನು. ಮೊದಲಿನವಳು ಬಂದು ಮುಂದೆ ಸಾಗಿದ್ದಾಗ ಕಾಂತಿಗ್ರಹನು ಬಾಯ್ದೆರೆದು ನಿಂತನು. ಇನ್ನೊಬ್ಬಳು ಬಂದಾಗ, ಅವಳನ್ನು ನೋಡುತ್ತಲೇ ಅವನ ಮೈಯಲ್ಲಿ ನಡುಕ ಹುಟ್ಟಿತು. ಮೂರನೆಯವಳು ಹಾಯ್ದು ಹೋದಾಗ ಅವನ ಮುಖದ ಬಣ್ಣ ಬದಲಾಗಿ, ಹೃದಯ ಕಂಪಿಸಿತು.

ಮೂವರೂ ಹೋದ ಕೂಡಲೇ ರಾಜನು ಆತುರನಾಗಿ ಕೇಳಿದನು. ಆಗ ಕಾಂತಿಗ್ರಹನು ಮನಸ್ಸಿನಲ್ಲಿಯೆ ಹೀಗೆ ಯೋಚಿಸಿದನು. ರಾಜನಿಗೆ ನಾನು ನನಗನಿಸಿದ ಸಂಗತಿಯನ್ನು ಹೇಳಿದರೆ ಅವನಿಗೆ ಒಪ್ಪಿಗೆಯಾಗಲಿಕ್ಕೂ ಇಲ್ಲ. ಅದಕ್ಕಿಂತ ಈ ಮಾತನ್ನು ತಿಳಿದುಕೊಂಡ ಇತರ ಇಬ್ಬರು ರಾಣಿಯರು ನನ್ನನ್ನು ಕೊಲ್ಲಿಸಲೂಬಹುದು. ಹೀಗೆಂದುಕೊಂಡು ಕಾಂತಿಗ್ರಹನು ಮರು ದಿನ ಸಂಜೆಗೆ ತಪ್ಪದೇ ಹೇಳುವೆನೆಂದು ರಾಜನ ನಿರೋಪವನ್ನು ಪಡೆದನು. ಇತ್ತ ರಾಜನು ನಾಳೆ ನನ್ನ ರಾಣಿಯರಲ್ಲಿಯೆ ಹೆಚ್ಚು ಚೆಲುವೆ ಯಾರೆಂದು ತಿಳಿದುಕೊಂಡು, ಅವಳನ್ನೆ ದ್ವಿಗುಣಿತವಾಗಿ ಪ್ರೇಮಿಸುವೆನು ಎಂದುಕೊಳ್ಳುತ್ತ ರಾತ್ರಿಯನ್ನು ಕಳೆದನು.

ಕಾಂತಿಗ್ರಹನು ನಾಳೆ ಎಂದು ಹೇಳಿದ್ದರ ಕಾರಣವನ್ನು ನಯನೇತ್ರನು ಸರಿಯಾಗಿಯೆ ಗ್ರಹಿಸಿದನು. ಈ ಕ್ಷತ್ರಿಯನು ಸುಳ್ಳು ಹೇಳುವನು, ಇಲ್ಲಿಂದ ಓಡಿ ಹೋಗುವನು ಎಂದು ತಿಳಿದು, ಕೂಡಲೇ ರಾಜನನ್ನು ಕಂಡು, ವಿಷಯವನ್ನು ನಿವೇದಿಸಿದನು. ಆಗ ರಾಜನು, ಕಾಂತಿಗ್ರಹನ ಅಂತರಂಗ ವಿಚಾರವನ್ನು ತಿಳಿಯುವ ಬಗೆ ಹೇಗೆ ಎಂದು ಪ್ರಶ್ನೆ ಮಾಡಲು, ನಯನೇತ್ರವು ಒಂದು ಉಪಾಯವನ್ನು ಹೇಳಿಕೊಟ್ಟನು. ಆ ಪ್ರಕಾರ ಮಾಡಿ, ರಾಜನು ಕಾಂತಿಗ್ರಹನ ಅಂತರಂಗವನ್ನು ಅರಿತನು. ಅದರಂತೆ ಆ ಒಬ್ಬಳ ಮೇಲೆ ತನ್ನ ಪ್ರೇಮವನ್ನೆಲ್ಲ ಮೀಸಲಿಟ್ಟನು. ಇದುವರೆಗೆ ಸವತಿ ಮತ್ಸರವೆಂಬುದನ್ನು ಅರಿಯದ ಆ ರಾಣಿಯರಲ್ಲಿ, ಉಳಿದಿಬ್ಬರು ಮತ್ಸರ ಪ್ರೇರಿತರಾಗಿ, ರಾಜನ ಆ ಮೆಚ್ಚಿನ ಮಡದಿಗೆ ವಿಷ ಹಾಕಿಸಿದರು. ಅದರಿಂದ ಸಿಟ್ಟಿಗೆದ್ದ

ರಾಜನು ಆ ಇಬ್ಬರು ರಾಣಿಯರನ್ನೂ ಕೊಲ್ಲಿಸಿದನು. ನಯನೇತ್ರವು ಹೇಳಿದಂತೆ, ತನ್ನ ಹುಚ್ಚು ಸಂಶಯದಿಂದಾಗಿ ಆ ರಾಜನು ಮೂವರು ರಾಣಿಯರನ್ನೂ ಕಳೆದುಕೊಳ್ಳಬೇಕಾಯಿತು. ಈಗ ಹೇಳು ದೇವೀ, ರಾಜನು ಯಾವ ರಾಣಿಯ ಮೇಲೆ ತನ್ನ ಮೋಹವನ್ನು ಇಮ್ಮಡಿಸಿದನು ? ನಯನೇತ್ರವು, ಆ ಕ್ಷತ್ರಿಯನ ಇಂಗಿತವನ್ನು ತಿಳಿಯಲು ರಾಜನಿಗೆ ಯಾವ ಉಪಾಯ ಹೇಳಿರಬಹುದು ?

ಇಷ್ಟು ನುಡಿದು ರಸಕೋಶನು ಸುಮ್ಮನಾದನು. ತನ್ನ ಮನದನ್ನೆಯು ಇದಕ್ಕೆ ಉತ್ತರ ಹೇಳಿಯಾಳೆ, ಇಲ್ಲವೆ ಎನ್ನುತ್ತ ರಾಜನು ಆತುರನಾದಾಗ ಆಕೆ ಹೇಳಿದಳು. "ಆ ಕ್ಷತ್ರಿಯನಿಗೆ ಮೂರನೆಯವಳೇ ಹೆಚ್ಚು ಸುಂದರಿಯಾಗಿ ಕಂಡು ಬಂದುದು ಸ್ಪಷ್ಟವೇ ಇತ್ತು. ಮೊದಲಿನವಳು ಹಾಯ್ದು ಹೋದಾಗ, ಅವಳ ಸೌಂದರ್ಯವು ಅವನನ್ನು ಚಕಿತಗೊಳಿಸಿತು. ಎರಡನೆಯವಳನ್ನು ಕಂಡಾಗ ಅವನ ಆಶ್ಚರ್ಯ ಮೇರೆಮೀರಿತು. ಮೂರನೆಯವಳ ರೂಪವು ಮಾತ್ರ ಅವನ ಹೃದಯವನ್ನು ಸೂರೆಗೊಂಡದ್ದರಿಂದ ಅವನ ಮುಖವು ಕಪ್ಪಿಟ್ಟು, ಹುಚ್ಚುಕಳೆ ಸುರಿಯಿತು. ಆದರೂ ನಯನೇತ್ರವಿಗೆ ಖಾತ್ರಿ ಮಾಡಿಕೊಳ್ಳಬೇಕಿತ್ತು. ಈ ಸಂಬಂಧದಲ್ಲಿ ಹಲವು ಉಪಾಯಗಳಿದ್ದರೂ ನಯನೇತ್ರವು ಹೀಗೆ ಹೇಳಿರಬೇಕು. 'ಪ್ರತಿಯೊಬ್ಬ ರಾಣಿಯ ಹೆಸರಿನಲ್ಲಿ ಪ್ರೇಮಯಾಚನೆಯ ಸುಳ್ಳುಪತ್ರಗಳನ್ನು ಕಾಂತಿಗ್ರಹನಿಗೆ ಬರೆಯಿಸಿರಿ, ಮೂವರೂ ಅವನಿಗೆ ಒಂದೇ ಸಮಯವನ್ನು ಕೊಟ್ಟು, ತಂತಮ್ಮ ಸ್ಥಳಗಳಲ್ಲಿ ಆ ವೇಳೆಗೆ ಬಂದು ಕಾಣಬೇಕೆಂದು ಯೋಚಿಸಬೇಕು. ಯಾರ ರೂಪವು ತನ್ನ ಹೃದಯವನ್ನು ಸೂರೆಗೊಂಡಿತೋ, ಆ ಮೂರನೆಯವಳ ಕಡೆಗೇ, ಆ ಕ್ಷತ್ರಿಯನು ಹೋಗುವನೆಂಬುದು ಸ್ಪಷ್ಟ.' ಈ ಉಪಾಯದಿಂದಲೇ, ರಾಜನು ತನ್ನ ರಾಣಿಯರಲ್ಲಿ ಅತ್ಯಂತ ರೂಪವತಿ ಯಾರೆಂದು ಕಲ್ಪಿಸಿಕೊಂಡಿರಬೇಕು."

ಇಷ್ಟು ಹೇಳಿ ರಾಣಿಯು ಒಂದು ಕ್ಷಣ ತಡೆದಳು. ಬೇರೆ ಉಪಾಯಗಳನ್ನು ಹೇಳುವ ಅಗತ್ಯವಿದೆಯೆ ಎಂಬ ಭಾವದಿಂದ. ಆದರೆ ರಸಕೋಶನಿಗೆ ಇದೊಂದೇ ಉಪಾಯವು ಗೊತ್ತಿದ್ದುದರಿಂದ ಅವನು ಮಾತನಾಡಲಿಲ್ಲ. ಅಲ್ಲಿಂದ ಆ ನಾಗಕನ್ನಿಕೆಯು ಅವನತ್ತ ತುಸು ಹೊತ್ತು ನೋಡಿ, ಮುಂದೆ

ಸಾಗಿದಳು. ಆಗ ರಾಜನ ಹೃದಯವೂ ಅವಳ ಹಿಂದೆ ಧಾವಿಸಿತು. ಇತ್ತ ರಸಕೋಶನು ತನ್ನ ಮಿತ್ರನನ್ನು ಕರೆದುಕೊಂಡು ತಮ್ಮ ನಿವಾಸಕ್ಕೆ ಹಿಂತಿರುಗಿದನು.

## ಚತುರ್ಥ ದಿವಸ

ರಾಜನು ರಸಕೋಶನನ್ನು ಕುರಿತು "ಮಿತ್ರನೇ ನನ್ನ ಪ್ರೇಯಸಿಯು ಮತ್ತೆ ವಿಜಯಿಯಾದಳು. ಅಹಾ! ಏನು ಅವಳ ಪ್ರತ್ಯುತ್ಪನ್ನಮತಿತ್ವ! ಇನ್ನು ನನಗೆ ಆಕೆ ಹೇಗೆ ದೊರಕಿಯಾಳು? ಈಗ ಆ ಚಿತ್ರವೂ ಕೂಡ ನಿಸ್ಸಾರವಾಗಿ ಕಾಣುತ್ತಿದೆಯಲ್ಲ" ಎಂದು ಬಹುವಿಧವಾಗಿ ಪ್ರಲಾಪಿಸಿದನು.

ಮರುದಿನ ಸಂಜೆಯಾಗುತ್ತಲೂ, ರಸಕೋಶನು ಮಿತ್ರಸಹಿತನಾಗಿ ಅನಂಗರಾಗಿಣಿಯ ಮುಂದೆ ನಿಂತುಕೊಂಡು ಕಥೆಯನ್ನು ಆರಂಭಿಸಿದನು :

ದೇವೀ ಹೀಗೆಯೇ ಒಂದು ಊರಲ್ಲಿ ಮಾಧವನೆಂಬ ಓರ್ವ ಬ್ರಾಹ್ಮಣ ನಿದ್ದನು. ಅವನು ಒಂದು ಸಲ, ತನಗೆ ತಿಳಿಯದಲೆ ಒಂದು ದೊಡ್ಡ ತಪ್ಪನ್ನು ಮಾಡಿದನು. ಆಗ ಅವನ ಗುರುಗಳು ಅವನಿಗೆ ಈ ಪಾಪ ಪರಿಹಾರಾರ್ಥವಾಗಿ ಗಂಗಾಸ್ನಾನ ಮಾಡುತ್ತ, ತನ್ನ ಶೇಷಾಯುಷ್ಯವನ್ನು ಕಳೆದಲ್ಲಿ, ನರಕಭಾಜನನಾಗುವುದು ತಪ್ಪುತ್ತದೆಂದು ಬೋಧಿಸಿದನು. ಅದ ರಂತೆ ಆ ಬ್ರಾಹ್ಮಣನು ತನ್ನ ಸಂಸಾರದ ಹೊಣೆಯನ್ನು ಹಿರಿಯ ಮಗನಿಗೆ ಒಪ್ಪಿಸಿ, ಉತ್ತರಾಭಿಮುಖವಾಗಿ ಹೊರಟನು. ಹಲವು ದಿನಗಳ ಮಾರ್ಗ ಕ್ರಮಣದ ನಂತರ, ಅವನು ದಾರಿಯಲ್ಲಿ ಒಂದು ಸಣ್ಣ ಹಳ್ಳವನ್ನು ಕಂಡನು. 'ಇದೇ ಗಂಗಾನದಿ ಇರಬೇಕು' ಎಂದುಕೊಂಡು, ಅಲ್ಲಿ ತನ್ನ ವಾಸ್ತವ್ಯವನ್ನು ಹಾಕಿದನು. ನಿತ್ಯವೂ ನೀರಿನ ಗುಂಡಿ ಇದ್ದಲ್ಲಿ ಸ್ನಾನ ಮಾಡುತ್ತ, ಗುರುಗಳು ಹೇಳಿದ ಜಪವನ್ನು ಮಾಡುತ್ತ ಐದು ವರ್ಷಗಳನ್ನು ಕಳೆದನು.

ಒಮ್ಮೆ ಅದೇ ಮಾರ್ಗವಾಗಿ ಓರ್ವ ಸನ್ಯಾಸಿಯು ಹೊರಟಿದ್ದನು. ಮಾಧವನನ್ನು ಕಂಡು, "ಇಲ್ಲಿ ಏನು ಮಾಡುತ್ತೀ" ಎಂದು ಕೇಳಿದನು. "ನನ್ನ ಗುರುಗಳು ಹೇಳಿದ ಪ್ರಕಾರ, ಪಾಪಪರಿಹಾರಾರ್ಥವಾಗಿ ಈ ಗಂಗಾ ನದಿಯ ದಡದಲ್ಲಿ ತಪೋನುಷ್ಠಾನದಲ್ಲಿ ಶೇಷಾಯುಷ್ಯವನ್ನು ಕಳೆಯುತ್ತಿದ್ದೇನೆ" ಎಂದು ಆ ಬ್ರಾಹ್ಮಣನು ಉತ್ತರಿಸಿದನು.

"ಅಯ್ಯೋ! ಮೂಢನೇ. ಈ ಬತ್ತಿದ ಹಳ್ಳಕ್ಕೂ ಗಂಗಾನದಿಗೂ ಏನು ಸಂಬಂಧ? ಗಂಗಾನದಿ ಇದಕ್ಕೂ ದೂರವಿದೆ" ಎಂದು ಸನ್ಯಾಸಿಯು ಉತ್ತರಿಸಿದನು.

"ಹೀಗೋ! ನಾನೆಂಥ ತಪ್ಪು ಮಾಡಿಗೆನಲ್ಲ! ತಾವು ಹೇಳಿ, ನನ್ನ ಮೇಲೆ ದೊಡ್ಡ ಉಪಕಾರವನ್ನೇ ಮಾಡಿದಿರಿ" ಎನ್ನುತ್ತ ತನ್ನ ಸಲಕರಣೆಗಳನ್ನು ಎತ್ತಿಕೊಂಡು ಮತ್ತೆ ಉತ್ತರಾಭಿಮುಖವಾಗಿ ಹೊರಟನು. ದಾರಿಯಲ್ಲಿ ಒಂದು ನದಿಯು ಹತ್ತಿತು. 'ಓ! ಇಲ್ಲಿದೆ ಗಂಗಾನದಿ!' ಎಂದು ಅದರ ದಡದಲ್ಲಿಯೆ ತನ್ನ ವಾಸ್ತವ್ಯವನ್ನು ಹಾಕಿದನು. ನಿತ್ಯವೂ ಸ್ನಾನ ಮಾಡುತ್ತ ಗುರುಗಳು ಹೇಳಿದಂತೆ ಜಪ-ತಪಗಳಲ್ಲಿ ತೊಡಗುತ್ತ ಮತ್ತೆ ಐದು ವರ್ಷಗಳನ್ನು ಕಳೆದನು.

ಒಂದು ದಿನ ಅವನು ಅದೇ ಸ್ನಾನಮಾಡಿ ಬಂದು ಜಪದಲ್ಲಿ ತೊಡಗಿದ್ದಾಗ, ಒರ್ವ ಸಾಧುವು ಅವನನ್ನು ಕಂಡು, "ಅಯ್ಯಾ! ಗಂಗಾತಟಾಕಕ್ಕೆ ಹೋಗುವುದನ್ನು ಬಿಟ್ಟು, ಈ ಅಪ್ರಸಿದ್ಧ ನದಿಯಲ್ಲಿ ಮಿಂದರೇನು ಫಲ" ಎಂದು ನುಡಿದು ಮುಂದೆ ಸಾಗಿದನು.

"ಅಯ್ಯೋ! ನನ್ನ ದುರ್ದೈವವೇ! ಇದು ಗಂಗಾನದಿಯಲ್ಲವೆ?" ಎನ್ನುತ್ತ ತನ್ನ ಸಲಕರಣೆಗಳನ್ನೆತ್ತಿಕೊಂಡು ಪುನಃ ಮುಂದೆ ಸಾಗಿದನು. ದಾರಿಯಲ್ಲಿ ಅವನಿಗೆ ತುಂಬಿ ಹರಿಯುವ ಒಂದು ದೊಡ್ಡ ನದಿಯು ಕಾಣಿಸಿತು. "ಅಂತೂ ಕೊನೆಗೊಮ್ಮೆ ಗಂಗಾನದಿಯ ದಡಕ್ಕೆ ಬಂದೆ. ಇನ್ನಾದರೂ ನನ್ನ ಪಾಪ ಪರಿಹಾರದ ಯೋಗ್ಯ ಮಾರ್ಗ ದೊರಕೀತು" ಎಂದು ಸಂತೋಷಪಟ್ಟು, ಅಲ್ಲಿಯೆ ತನ್ನ ವಾಸ್ತವ್ಯವನ್ನು ಹೂಡಿದನು. ಜಪತಪಗಳಲ್ಲಿ ಹೆಚ್ಚು ಆಸ್ಥೆಯನ್ನು ತೋರಿ ಐದು ವರ್ಷಗಳನ್ನು ಕಳೆದನು.

ಒಂದು ದಿನ ಒರ್ವ ಯಾತ್ರಿಕನು ಬಂದು ಇವನಂತೆಯೇ ಸ್ನಾನ ಮಾಡಿ, ಆ ನದಿಯ ಹೆಸರನ್ನು ಜಪಿಸುತ್ತ ಅರ್ಘ್ಯವನ್ನು ಬಿಡುತ್ತಿದ್ದನು. ಆಗ ಮಾಧವ್ಯನು ಅವನ ಹತ್ತಿರ ಹೋಗಿ. "ಈ ಮಹಾನದಿಯ ಹೆಸರು ಏನೆಂದಿರಿ? ಇದು ಗಂಗಾನದಿಯಲ್ಲವೇನು?" ಎಂದು ಕೇಳಿದನು.

"ಇದು ನರ್ಮದಾ ನದಿಯೆಂಬುದೇ ನಿನಗೆ ಗೊತ್ತಿರಲಿಲ್ಲವೆ ? ಗಂಗಾ ಮಾತೆ ಇನ್ನೂ ಉತ್ತರದಲ್ಲಿದ್ದಾಳೆ" ಆ ಯಾತ್ರಿಕನೆಂದನು.

"ಮಹಾನುಭಾವನೇ, ಈ ವಿಷಯುವನ್ನು ಹೇಳಿ ನೀವು ನನ್ನನ್ನು ಒಂದು ದೊಡ್ಡ ಪಾಪದಿಂದ ಮುಕ್ತಮಾಡಿದಿರಿ" ಎನ್ನುತ್ತ ಮತ್ತೆ ತನ್ನ ಸಲಕರಣೆಗಳನ್ನೆತ್ತಿಕೊಂಡು ಉತ್ತರಾಭಿಮುಖವಾಗಿ ಪ್ರಯಾಣ ಬೆಳೆಸಿದನು. ಆದರೆ ಇಷ್ಟುವೇಳೆಗೆ ಅವನು ಮುದುಕನಾಗಿದ್ದನು. ಅವನ ದೇಹವು ಜಪತಪಗಳ ನಿಯಮದಿಂದ ವಿದೀರ್ಣವಾಗಿದ್ದಿತು. ಜ್ವರಪೀಡಿತನಾಗಿದ್ದರೂ ಹೇಗೊ ಕಾಲೆಳೆಯುತ್ತ, ಗಂಗಾನದಿಯನ್ನು ಮುಟ್ಟುವ ಏಕಮೇವ ಗುರಿಯಿಂದ ಐದು ವರ್ಷಗಳವರೆಗೆ ಮುಂದೆ ಸಾಗಿ ಒಂದು ದಿನ್ನೆಯ ಮೇಲೆ ಬಂದು ಬಿದ್ದನು. ತುಸು ದೂರದೃಷ್ಟಿಯನ್ನು ಹರಿಯಿಸುವಷ್ಟರಲ್ಲಿ ಅವನಿಗೆ ಗಂಗಾನದಿಯು ಕಾಣಿಸಿತು. ನೂರಾರು ಜನ ಸಾಧು ಸಂತರು ಸ್ನಾನ ಮಾಡುವುದು ಕಂಡುಬಂಗಿತು. "ಆಹಾ ! ಗಂಗಾಮಾಯಿ ! ಇದೀಗ ನಿನ್ನ ದರ್ಶನ ಲಭಿಸಿತೇ ! ಆದರೆ ನಾನೆಂಥ ಮಂದಭಾಗ್ಯ ! ಕೊನೆಗೂ ನಿನ್ನ ಸ್ಪರ್ಶ ನನಗೆ ಲಭಿಸಲಿಲ್ಲ. ಇಗೋ, ನನ್ನ ಪ್ರಾಣವು ಈಗಲೋ, ಇನ್ನೊಂದು ಗಳಿಗೆಗೋ ಎಂದು ಹೊರಟು ನಿಂತಿದೆ"— ಎಂದೆಲ್ಲ ಹಳಹಳಿಸುತ್ತ ಅಲ್ಲಿಯೇ ದೇಹಮುಕ್ತಿಯನ್ನು ಪಡೆದನು.

ಆ ಬ್ರಾಹ್ಮಣನನ್ನು ಪರಲೋಕದಲ್ಲಿ ಯಮನ ಮುಂದೆ ನಿಲ್ಲಿಸಿದಾಗ, ಚಿತ್ರಗುಪ್ತನು ಬಂದು "ಮಹಾರಾಜ ಈತ ದೊಡ್ಡ ಪಾಪವನ್ನು ಮಾಡಿದ್ದ. ೨೦ ವರ್ಷ ಕಾಲ ಗಂಗಾನದಿಯ ದಂಡೆಯ ಮೇಲೆ ತಪಸ್ಸು ಮಾಡಿ ಪುನೀತನಾಗಿದ್ದಾನೆ" ಎಂದನು.

ಆಗ ಆ ಬ್ರಾಹ್ಮಣನು, "ಇಲ್ಲ ಮಹಾರಾಜ, ಚಿತ್ರಗುಪ್ತನು ತಪ್ಪಿದ್ದಾನೆ. ನಾನು ಗಂಗಾನದಿಯನ್ನು ಕೊನೆಗೂ ತಲುಪಲೇ ಇಲ್ಲ" ಎಂದನು. ಆಗ ಯಮನು ನಕ್ಕನು. ಚಿತ್ರಗುಪ್ತನ ಹೇಳಿಕೆಯಂತೆ ಅವನಿಗೆ ಸದ್ಗತಿಯನ್ನು ಒದಗಿಸಿದನು. ಈಗ ಹೇಳು ದೇವಿ, ಬ್ರಾಹ್ಮಣನ ಮಾತಿಗೆ ಯಮನು ನಕ್ಕನೇಕೆ ?"

ಇಷ್ಟು ಹೇಳಿ ರಸಕೋಶನು ಸುಮ್ಮನಾದನು. ಆಗ ಆ ನಾಗವೇಣಿಯು "ಯಮಧರ್ಮರಾಯನು ನಗದೇ ಏನು ಮಾಡಿಯಾನು ? ಜಗತ್ತಿನ ವ್ಯಾಪಾರ ವೆಲ್ಲ ಒಂದು ಮಾಯೆಯೇ ಅಲ್ಲವೆ? ಮನುಷ್ಯನ ಭ್ರಾಂತಿಮೂಲವಾದ ಮನೋಭಾವಕ್ಕೆ ಅವನು ನಕ್ಕನು. ಆದರೂ ಆ ಬ್ರಾಹ್ಮಣನಿಗೆ ಸದ್ಗತಿ ಯುಂಟಾಯಿತು. ಅವನು ಗಂಗಾನದಿಯನ್ನು ತಲುಪದಿದ್ದರೂ, ಇತರ ಜಲ-ಪ್ರವಾಹಗಳಲ್ಲಿ ಅವನು ಗಂಗಾನದಿಯನ್ನೇ ಕಂಡನು. ಅದೇ ಭಾವದಿಂದ ತಪಸ್ಸು ಮಾಡಿದನು. ಗಂಗಾನದಿಯಲ್ಲಿ ಅನವರತವಾಗಿ ಮುಳುಗಿದರೂ ಚಿತ್ತಶುದ್ಧಿ ಇಲ್ಲದ ಮೂಲಕ ಅದೆಷ್ಟು ಜನ ನರಕವಾಸಿಗಳಾಗಿಲ್ಲ ?"

ಇಷ್ಟು ನುಡಿದು ಅನಂಗರಾಗಿಣಿಯು ಮೇಲೆದ್ದಳು. ಅನುಕಂಪೆಯಿಂದ ರಾಜನನ್ನು ನೋಡಿದಳು. ಮುಂದೆ ಸಾಗಿದಳು. ರಾಜನ ಹೃದಯವನ್ನು ಸೆಳೆದೊಯ್ದಳು. ಇತ್ತ ರಸಕೋಶನು ಬಲವಂತದಿಂದ ರಾಜನನ್ನು ಎಬ್ಬಿಸಿ ಕೊಂಡು ಅತಿಥಿಗೃಹಕ್ಕೆ ಕರೆದೊಯ್ದನು.

## ಪಂಚಮ ದಿವಸ

ರಾಜನು ರಸಕೋಶನನ್ನು ಕುರಿತು, "ಮಿತ್ರನೇ, ನಾಲ್ಕು ದಿನಗಳು ವ್ಯರ್ಥವಾಗಿ ಹೋದುವು. ನನ್ನ ಮನೋಹಾರಿಣಿಯನ್ನೇನಾದರೂ ಕಳೆದು ಕೊಳ್ಳುವ ಪ್ರಸಂಗ ಬಂದರೆ ನಿನ್ನನ್ನೆಂದೂ ಕ್ಷಮಿಸುವುದಿಲ್ಲ. ಅವಳು ನನ್ನ ಮೇಲೆ ದಯಾಮಯಿಯಾಗುತ್ತ ನಡೆದಿದ್ದಾಳೆಂದು ನನಗೇನೋ ಅನಿಸುವುದು. ಆದರೂ ಅವಳ ಪಣವೊಂದಿದೆಯಲ್ಲ" ಎಂದೆನ್ನುತ್ತ ದುಃಖದ ಭರದಲ್ಲಿ ಅವಳ ಚಿತ್ರವನ್ನಪ್ಪಿಕೊಂಡನು. ಮತ್ತೊಂದು ದಿನವನ್ನು ಹೇಗೋ ಕಳೆದನು.

ಆ ದಿನ ಸಂಜೆ ಅನಂಗರಾಗಿಣಿಯು ವಜ್ರಾಭರಣಗಳಿಂದ ದೇದೀಪ್ಯ ಮಾನಳಾಗಿ ತೋರುತ್ತಿದ್ದಳು. ವಿಷಣ್ಣವದನನಾದ ರಾಜನನ್ನೊಮ್ಮೆ ನೋಡಿ ರಸಕೋಶನ ಕಥೆಗೆ ಕಿವಿಗೊಟ್ಟಳು.

"ದೇವೀ, ಒರ್ವ ವೈಶ್ಯನು ಒಮ್ಮೆ ತನ್ನ ನೆರೆಮನೆಯಲ್ಲಿರುವವನ ಹೆಂಡತಿಯ ಮೇಲೆ ಪ್ರೇಮ ಮಾಡತೊಡಗಿದನು. ಆಕೆಯೂ ದುಃಶೀಲೆ ಯಾದುದರಿಂದ ಅವನ ಪ್ರೇಮದ ಕರೆಗೆ ಓಗೊಟ್ಟಳು. ಆದರೆ ಅವರಿಬ್ಬರ

ನಡುವೆ ಗಂಡನಿದ್ದುದರಿಂದ ಅವರ ಸಮಾಗಮ ಸಲ್ಲಾಪಗಳಿಗೆ ಆತಂಕವೆನಿಸ ತೊಡಗಿತು. ಆಗ ಆ ವಿಟನು, ಅವಳ ಗಂಡನ ಕೂಡ ವಿಶೇಷವಾದ ಸ್ನೇಹ ವನ್ನು ನಟಿಸಿ, ಅವರ ಮನೆಗೆ ಹೋಗಿ ಬರತೊಡಗಿದನು. ಆ ವಿಟನಿಗೆ ಮಂತ್ರಮಾಟ ವಿದ್ಯೆಯು ಅವಗತವಿದ್ದಿತು. ಅವಳ ಗಂಡನಿಗೆ ಆಗಾಗ ಅದರ ಅಮಿಷವನ್ನು ತೋರಿಸಿ, ತನಗೆ ಪರಕಾಯ ಪ್ರವೇಶ ವಿದ್ಯೆಯು ಬರುತ್ತ ದೆಂದೂ, ಅವನಿಗೆ ಕುತೂಹಲವಿದ್ದರೆ ತನ್ನ ದೇಹವನ್ನು ಬಿಟ್ಟು ಇನ್ನೊಬ್ಬರ ದೇಹವನ್ನು ಪ್ರವೇಶಿಸಬಹುದೆಂತಲೂ ತಿಳಿಸಿದನು. ಆ ಮೂರ್ಖ ಗಂಡನು ಅವನ ಮನದಿಂಗಿತವನ್ನು ತಿಳಿಯದೇ ಒಡಕೊಪ್ಪಿದನು.

ಒಂದು ದಿನ ಕತ್ತಲೆಯಾಗುತ್ತಲೂ ಇಬ್ಬರೂ ಸ್ಮಶಾನಕ್ಕೆ ಬಂದರು. ಆ ವಿಟನ ಮಂತ್ರವಿದ್ಯೆಯಿಂದ ಇಬ್ಬರೂ ತಂತಮ್ಮ ದೇಹವನ್ನು ತ್ಯಜಿಸಿದರು. ತನ್ನ ಪ್ರೇಯಸಿಯ ಗಂಡನನ್ನು ನಿರ್ದೇಹಿಯಾಗಿ ಮಾಡಿದೆನಲ್ಲ ಎಂಬ ಸಂತೋಷದ ಭರದಲ್ಲಿಯೆ, ಅವನ ದೇಹವನ್ನು ತಾನು ಪ್ರವೇಶಿಸಿ ಅವಳ ಗಂಡನ ರೂಪದಲ್ಲಿ ಅವಳ ಮನೆಯ ಕಡೆಗೆ ಭರದಿಂದ ಹೆಜ್ಜೆ ಹಾಕಿದನು.

ಆಗ ಆ ಗಂಡನು "ಅಯ್ಯೋ! ಎಲ್ಲಿ ಹೋದನೀತ? ನನ್ನ ದೇಹವೇ ಇಲ್ಲದಾಯಿತು" ಎಂದು ದುಃಖಪಡುತ್ತ ಅಲ್ಲಿಯೇ ಬಿದ್ದಿದ್ದ– ಆ ಮಂತ್ರವಾದೀ ವಿಟನ ದೇಹವನ್ನು ಅನಿವಾರ್ಯವೆಂಬಂತೆ ಪ್ರವೇಶಿಸಿದನು. ಆಗ ಅವನ ಕಾಲು ಗಳು ಅಭ್ಯಾಸ ಬಲದಿಂದ ವೈಶ್ಯನ ಮನೆಯತ್ತ ಎಳೆದುಕೊಂಡು ಬಂದುವು. ಇತ್ತ ಆ ಸ್ತ್ರೀಯು ತನ್ನ ವಿಟಪುರುಷನ ವಿರಹವನ್ನು ತಾಳಲಾರದೇ, ಗಂಡನು ಮನೆಯಲ್ಲಿಲ್ಲದುದರ ಲಾಭವನ್ನು ಪಡೆದು ಅಭಿಸಾರಿಕೆಯಂತೆ ವಿಟನ ಮನೆಗೇ ಬಂದಳು. ವಿಟನ ದೇಹವನ್ನು ಪ್ರವೇಶಿಸಿದ್ದ ಅವಳ ಗಂಡನೂ ಅಲ್ಲಿಗೇ ಬಂದನು. ವಿಟನ ಮನೆಯಲ್ಲಿ ತನ್ನ ಹೆಂಡತಿಯನ್ನು ನೋಡಿ ಅವನಿಗೆ ಅತೀವ ಆಶ್ಚರ್ಯವಾಯಿತು. ಆಕೆಯು ಅವನನ್ನು ತನ್ನ ಪ್ರಿಯಂಕರನಾದ ವೈಶ್ಯನೆಂದೇ ಬಗೆದು ಅವನನ್ನು ಬಲವಾಗಿ ಅಪ್ಪಿಕೊಂಡು ಮುತ್ತಿಟ್ಟು 'ಹಾ! ನನ್ನ ಪ್ರಿಯಂಕರಾ, ಅಂತೂ ಕೊನೆಗೊಮ್ಮೆ ನಿಮ್ಮನ್ನು ಸೇರಿದೆನು' ಎಂದು ಪ್ರೇಮಾಲಾಪನೆಗೆ ತೊಡಗಿದಳು. ಇಷ್ಟು ದಿನಗಳ ವರೆಗೆ ಅವಳ ಶೀತಲ ಸಮಾಗಮವನ್ನು ಹೊಂದಿದ್ದ ಆ ಮೂರ್ಖ ಗಂಡನಿಗೆ ಅವಳ ಈ ಉತ್ಕಂದದ,

ಉನ್ಮಾದದ ಪ್ರೇಮ ವಿಲಾಸವು ಸ್ವರ್ಗಸದೃಶವಾಯಿತು. ಅದರ ಭರದಲ್ಲಿ ವಿಟದೇಹಿಯಾಗಿಯೇ ಅವಳೊಡನೆ ರಾತ್ರಿಯನ್ನು ಕಳೆದನು.

ಇತ್ತ ಆ ವೈಶ್ಯನು, ತನ್ನ ನೆರೆಯುವನ ದೇಹಧಾರಕನಾಗಿ, ನೆರೆಯುವನ ಮನೆಯಲ್ಲಿ ಅವಳಿಗಾಗಿ ದಾರಿ ಕಾಯುತ್ತ ಕುಳಿತು ಕುಳಿತು ಬೇಸತ್ತನು. ಇಡೀ ರಾತ್ರಿ ಹಾಗೆಯೇ ಕಳೆಯಿತು. ಮನಸ್ಸು ಬೇಸರದಿಂದ ಖತಿಗೊಂಡು ಹುರಪಳಿಸಿತು. ಬೆಳಗಿನ ಜಾವದ ವರೆಗೆ ಕಾಯ್ದರೂ ಅವಳು ಬರಲೇ ಇಲ್ಲವೆಂದು ಶಪಿಸುತ್ತ ತನ್ನ ಮನೆಗೆ ಹೊರಟನು. ಇದೇ ವೇಳೆಗೆ ಆ ಸ್ತ್ರೀಯು ಬೆಳಗಾಗುವುದರೊಳಗೆ ಮನೆ ಸೇರಬೇಕೆಂದು ಯೋಚಿಸಿ, ಮೆಲ್ಲನೆ ಎದ್ದು ವಿಟನ ಮನೆಯ ಹಿಂದಿನ ಬಾಗಿಲಿನಿಂದ ಹೊರಬಿದ್ದಳು.

ಪರದೇಹೀ ವೈಶ್ಯನು ತನ್ನ ಕೋಣೆಗೆ ಬಂದು ನೋಡಿದಾಗ, ಪ್ರತಿರೂಪಿಯಾದ ಆವಳ ಗಂಡನು ಸುಖವಾಗಿ ನಿದ್ರೆ ಹೊಡೆಯುತ್ತಿದ್ದನು. ವೈಶ್ಯನು ಅವನನ್ನೆಬ್ಬಿಸಿ “ಏ! ಇಲ್ಲೇನು ಮಾಡುತ್ತಿದ್ದಿ?” ಎಂದು ಗದರಿಸಿದನು. “ಮತ್ತೇನು ಮಾಡಲಿ? ನೀನು ನನ್ನನ್ನು ಹಾಗೇ ಬಿಟ್ಟು ಹೋಗಿಬಿಟ್ಟೆ. ಕೊನೆಗೆ ನಿರ್ವಾಹವಿಲ್ಲದೆ ಅಲ್ಲಿಯೇ ಬಿದ್ದಿದ್ದ ನಿನ್ನ ದೇಹವನ್ನು ಪ್ರವೇಶಿಸಿದೆನು” ಎಂದು ಅವನು ಉತ್ತರಿಸಿದನು.

“ನಿನ್ನ ಈ ಭಂಡ ದೇಹವನ್ನು ಹೊತ್ತು ಇಡೀ ರಾತ್ರಿಯೆಲ್ಲ ಒದ್ದಾಡಿದೆನು. ಇದನ್ನು ಸುಟ್ಟು ಹಾಕಿ ಬಿಡುವೆ” ಎಂದು ಮಂತ್ರವಾದಿಯು ಕೂಗಿದನು.

“ಹಾಗೆ ಮಾತ್ರ ಮಾಡಬೇಡ. ನಿನ್ನ ದೇಹವನ್ನು ನೀ ತಗೋ. ನನ್ನದು ನನಗಿರಲಿ” ಎಂದನಾತ. ಆಗ ಇಬ್ಬರೂ ಮತ್ತೆ ಸ್ಮಶಾನಕ್ಕೆ ಬಂದರು. ಪೂರ್ಣ ಬೆಳಕಾಗುವುದರೊಳಗೇ ಪುನಃ ನಿರ್ದೇಹಿಗಳಾಗಿ, ತಂತಮ್ಮ ಕಾಯಗಳನ್ನು ಪ್ರವೇಶಿಸಿದರು.

ಆಗ ಆ ಗಂಡನಿಗೆ ಕನಸಿನಿಂದ ಎದ್ದವರಂತೆ ಜ್ಞಾನೋದಯವಾಯಿತು. ತನ್ನ ಹೆಂಡತಿಯನ್ನು ಆ ವೈಶ್ಯನು ಪ್ರೇಮಿಸಿ ಅನ್ಯಾಯ ಮಾಡಿದನೆಂದು ಖತಿಗೊಂಡನು. ತನಗಾದ ಅಪಮಾನದ ಸೇಡು ತೀರಿಸಿಕೊಳ್ಳಲು ಅವನಿಗೆ

ನಾಲ್ಕು ಏಟು ಹೊಡೆದು, ರಾಜಭಟರಿಗೆ ಒಪ್ಪಿಸಿ, ನ್ಯಾಯಾಧಿಪತಿಗೆ ದೂರು ಕೊಟ್ಟನು. ಆಗ ನ್ಯಾಯಾಧಿಪತಿಯು ಮೂವರನ್ನೂ ಕರೆಸಿದನು. ಆ ಗಂಡನು ನಡೆದ ಸಂಗತಿಯನ್ನೆಲ್ಲ ನಿವೇದಿಸಿ, ತನ್ನ ಹಾಗೂ ತನ್ನ ಮನೆತನದ ಗೌರವವನ್ನು ಹಾಳು ಮಾಡಿದರೆಂದೂ, ಅದಕ್ಕಾಗಿ ಅವರಿಬ್ಬರನ್ನೂ ಘೋರ ಶಿಕ್ಷೆಗೆ ಗುರಿಪಡಿಸಬೇಕೆಂದೂ ಕೇಳಿಕೊಂಡನು. ಆಗ ಆ ವಿಟನು "ನನ್ನಿಂದ ಅನ್ಯಾಯವು ಘಟಿಸಿಲ್ಲ. ಇವನ ಹೆಂಡತಿಯನ್ನು ನಾನು ಮುಟ್ಟಿಯೇ ಇಲ್ಲ!" ಎಂದು ಹೇಳಿದನು. ಆ ಹೆಂಗಸು ತನ್ನ ಗಂಡನನ್ನು ಕುರಿತು "ಯಾಕೆ ಇದೆಲ್ಲ? ನಾನು ನಿಮ್ಮನ್ನೇ ಅಪ್ಪಿಕೊಂಡೆನಲ್ಲದೆ, ಅನ್ಯರನ್ನಲ್ಲ" ಎಂದಳು. ಆಗ ಆ ನ್ಯಾಯಾಧಿಪತಿಯು ಬಹಳಷ್ಟು ಯೋಚಿಸಿ, ಕಾನೂನು ಕಟ್ಟುಗಳನ್ನು ತಿರುವಿಹಾಕಿ, ಕೊನೆಗೆ ಆ ಗಂಡನಿಗೆ ನಿಜವಾದ ಅಪರಾಧಿ ನೀನು ಎಂದು ಬಾಯಿಂದ ಹೇಳಿ ಮೂವರನ್ನೂ ಬಿಡುಗಡೆ ಮಾಡಿಬಿಟ್ಟನು. ಈಗ ಹೇಳು ದೇವೀ, ನ್ಯಾಯಾಧಿಪತಿಯು ಮಾಡಿದ್ದು ಸರಿಯೆ?"

ಇಷ್ಟು ಹೇಳಿ ರಸಕೋಶನು ಸುಮ್ಮನಾದನು. ಆಗ ಆ ವಜ್ರಾಂಕಿತೆಯು, "ನ್ಯಾಯಾಧಿಪತಿಯ ನಿರ್ಣಯವು ಅತ್ಯಂತ ಸರಿಯಾದುದು. ಆದರೆ ಅವನು ಬಹಳಷ್ಟು ಯೋಚಿಸುವ ಕಾರಣವೇ ಇರಲಿಲ್ಲ. ಆ ವಿಟನಂತೂ ಭಂಡನೇ ಇದ್ದನು. ಪರದಾರಾಪಹರಣಕ್ಕೆ ಮನಸೋತನು. ಆದರೆ ಅವನಿಂದ ಅದು ಕೃತಿರೂಪಕ್ಕಿಳಿಯಲಿಲ್ಲವಾದ್ದರಿಂದ, ಕಾನೂನಿನರೀತ್ಯಾ ಅವನನ್ನು ಶಿಕ್ಷಿಸಲಿಕ್ಕೆ ಬರುವುದಿಲ್ಲ. ಇತ್ತ ತನ್ನ ಗಂಡನಿರುವಾಗ ಪರಪುರುಷನಲ್ಲಿ ಅನುರಕ್ತೆಯಾದುದು ಇವಳದೂ ಅಪರಾಧವೇ. ಆದರೆ ಆಕೆಯ ವಾಮಪ್ರೇಮವು ಕೃತಿಗಿಳಿದರೂ ಆಕೆ ತನ್ನ ಗಂಡನ ತಿಳುವಳಿಕೆ, ಅನುಮಂತಿಗಳ ಕಣ್ಣರಿಕೆಯಲ್ಲಿಯೇ ಹಾಗೆ ಮಾಡಿದಳಲ್ಲವೆ? ಆದುದರಿಂದ ಅವಳೂ ಶಿಕ್ಷಾರ್ಹಳಾಗುವುದಿಲ್ಲ. ಆದರೆ ಗಂಡನು ತನ್ನ ಕಾಮವಾಸನೆಯನ್ನು ಹಿಡಿತದಲ್ಲಿಟ್ಟುಕೊಳ್ಳಲಾಗದೇ, ತನ್ನ ಹೆಂಡತಿಯು ಪರದೇಹಿಯೊಡನೆ ಸುಖಿಸುತ್ತಿರುವಳೆಂಬುದನ್ನು ತಿಳಿದೂ ತಿಳಿದೂ ಅದಕ್ಕೆ ಅನುಮತಿ ಇತ್ತು, ಪ್ರೋತ್ಸಾಹಿಸಿ ತನ್ನ ಗೌರವವನ್ನು ತಾನೇ ಕಳೆದುಕೊಂಡನು. ಅವನಿಗೆ ಅದೇ ಶಿಕ್ಷೆ— ಎಂದು ಬಾಯಿಯಿಂದ ಬುದ್ಧಿ ಹೇಳಿ ಆ ಮೂವರನ್ನೂ ಬಿಡಲಾಯಿತು."

ಇಷ್ಟು ನುಡಿದು ಅನಂಗರಾಗಿಣಿಯು ರಾಜನತ್ತ ಉತ್ಕಂಠೆಯಿಂದ ನೋಡಿದಳು. ಕ್ಷಣಹೊತ್ತು ಅಲ್ಲಿಯೇ ಕುಳಿತಳು. ಅನಿವಾರ್ಯವೆಂಬಂತೆ ಅಲ್ಲಿಂದ ಎದ್ದು, ಮುಂದೆ ಸಾಗಿದಳು. ಅವಳ ಹಿಂದೆಯೇ ರಾಜನ ಹೃದಯವು ಧಾವಿಸಿತು. ರಸಕೋಶನು ರಾಜನನ್ನು ಬಲವಂತದಿಂದ ಎಬ್ಬಿಸಿ ಅತಿಥಿಗೃಹಕ್ಕೆ ಕರೆದೊಯ್ದನು.

## ಷಷ್ಠ ದಿವಸ

ರಾಜನು ರಸಕೋಶನನ್ನು ಕುರಿತು, "ಮಿತ್ರನೆ, ನನ್ನ ಗಮನವೆಲ್ಲ ಆ ನಾಗರತ್ನಳ ಕಡೆಗೇ ಇರುತ್ತಿದ್ದುದರಿಂದ, ನೀನು ಏನು ಕಥೆ ಹೇಳುವೆಯೋ ಇದುವರೆಗೆ ನಾನು ಗಮನ ಕೊಟ್ಟಿರಲೇ ಇಲ್ಲ. ಈಗ ಐದು ದಿನಗಳು ಸಂದರೂ ಅವಳನ್ನು ನೀನು ಸೋಲಿಸುವ ಸಂಭವ ಕಾಣೆನಲ್ಲ. ಆದರೂ ನಿನ್ನ ಸ್ನೇಹಕ್ಕಾಗಿ ನಾನು ಋಣಿಯಾಗಿದ್ದೇನೆ. ಇನ್ನು ಬೇರೆ ಬಗೆಯ ಕಥೆ ಹೇಳಿ, ಅವಳನ್ನು ಸೋಜಿಗಗೊಳಿಸಲಾರೆಯಾ ? ನನ್ನ ದುರ್ದೈವಕ್ಕೆ, ಅವಳ ನಿತ್ಯ ದರ್ಶನದಿಂದ ಈ ಪ್ರತಿಕೃತಿಯು ಅತ್ಯಂತ ನಿಸ್ಸಾರವಾಗಿ ಕಾಣುತ್ತಲಿದೆ. ಮಿತ್ರನೇ, ಏನಾದರೂ ಹೊಸ ಉಪಾಯ ಮಾಡಲಾರೆಯಾ ?" ಎಂದು ಹಲುಬಿದನು.

ಮರುದಿನ ಇಬ್ಬರೂ ಆಮೋದಹರ್ಮ್ಯಕ್ಕೆ ಬಂದಾಗ ಅವಳು ಆಗಲೇ ಬಂದು ಕುಳಿತಿದ್ದಳು. ಅಂದು ವಿವಿಧ ವರ್ಣದ ಸುವಾಸಿಕ ಹೂಗಳಿಂದ ಆಕೆ ಅಲಂಕಾರ ಮಾಡಿಕೊಂಡಿದ್ದಳು. ಹೂವಿನ ಕಿರೀಟವನ್ನು ಧರಿಸಿದ್ದಳು. ರಾಜನು ಅವಳ ರೂಪರಸಾಸ್ವಾದನೆಯಲ್ಲಿ ಮಗ್ನನಾಗಿದ್ದಾಗ, ರಸಕೋಶನು ಮುಂದೆ ಬಂದು ಹೇಳತೊಡಗಿದನು :

"ದೇವೀ, ಒಮ್ಮೆ ಒಂದು ಅಡವಿಯಲ್ಲಿ ಸುಂದರವಾದ ಒಂದು ಎಳೆಯ ಜೇನ್ನೊಣವಿದ್ದಿತು. ಹುಟ್ಟಿದಂದಿನಿಂದ ತಂದೆಯ ಗೂಡನ್ನು ದಾಟಿ ಹೊರ ಬಿದ್ದಿರದ ಆ ಹುಳವು ಮೊದಲ ಬಾರಿಗೆ ಹೊರಹೊರಟಿತು. ಗಾಳಿಯಲ್ಲಿ ಅದು ಮೆಲ್ಲಗೆ ಅಲೆದಾಡುತ್ತಿರುವಾಗ, ಎಲ್ಲಿಂದಲೋ ತೇಲಿ ಬರುವ ಸುಮಧುರ ವಾಸನೆ ಅದನ್ನು ಆಕರ್ಷಿಸಿತು. ಆ ಆಕರ್ಷಣೆಯ ಗುಂಗಿನಲ್ಲಿ ಆ ಹುಳವು ಏಕಚಿತ್ತದಿಂದ ಮುಂದುವರಿದಾಗ, ಅದೇ ಅರಳಿದ ಒಂದು ಸುಂದರವಾದ

ಆರಕ್ತ ವರ್ಣದ ಗುಲಾಬಿಹೂವನ್ನು ಕಂಡಿತು. ಜೇನ್ನೊಣವು ಅದರೊಳಗಿನ ಮಕರಂದವನ್ನು ಸವಿಯುವುದಕ್ಕಾಗಿ ಧಾವಿಸಲು. ಆಗ ಗುಲಾಬಿ ಪುಷ್ಪವು ಅದನ್ನು ನಿವಾರಿಸಿ, "ಎಲ್ಲೈ ಹುಳವೇ, ನಿನ್ನ ಜಾತಿ-ಬಾಂಧವರ ಹುಟ್ಟು ಗುಣದ ಪ್ರಕಾರ ನನ್ನಲ್ಲಿಯ ಮಧುವನ್ನು ಹೀರಬಂದೆಯಲ್ಲವೇ ? ಅದಕ್ಕೆ ಪ್ರತಿಯಾಗಿ ಏನನ್ನಾದರೂ ಕೊಡುವ ವಿಚಾರ ಮಾಡಲಾಗದೆ ಈ ಬಲುಮೆ ಸಲ್ಲದು" ಎಂದಿತು.

ಆಗ ಆ ಭೃಂಗವು ಗುಂಯ್‌ಗುಡುತ್ತ "ಎಲ್ಲೈ ಸೊಬಗಿನ ಹೂವೇ, ಏನನ್ನು ನಾನು ನಿನಗೆ ಕೊಡಬಲ್ಲೆ ?" ಎಂದು ಕೇಳಿತು.

"ಮೂರ್ಖ ಹುಳುವೆ, ನನಗೆ ನಿನ್ನಿಂದ ಏನು ಬೇಕು ಎಂಬುದನ್ನು ಹೇಳಿಕೊಡಬೇಕೆ ? ಹೋಗು ಹೋಗು. ನಿನಗೆ ಗೊತ್ತಿಲ್ಲದಿದ್ದರೆ ಯಾರ ನ್ನಾದರೂ ಕೇಳಿಕೊಂಡು ಆ ಮೇಲೆ ನನ್ನೆಡೆಗೆ ಬಾ" ಎಂದು ಕಳಿಸಿಕೊಟ್ಟಿತು.

ಆಗ ಜೇನ್ನೊಣವು ಸಿಟ್ಟಿನಿಂದ ಇನ್ನಷ್ಟು ಗುಂಯ್‌ಗುಡುತ್ತ ಹೊರ ಟಿತು. ದಾರಿಯಲ್ಲಿ ಅದು ಒಂದು ಗಿಡದಡಿಯಲ್ಲಿ ರೆಕ್ಕೆಹುಳುವು ಗಡಿಬಿಡಿ ಯಿಂದ ಹೋಗುತ್ತಿದ್ದುದನ್ನು ಕಂಡು, ಅದನ್ನು ತಡೆದು, "ಸೋದರನೇ, ಗುಲಾಬಿ ಹೂವಿಗೆ ಏನು ಬೇಕೆಂಬುದನ್ನು ನೀನು ಹೇಳಬಲ್ಲೆಯಾ ?" ಎಂದು ಕೇಳಿತು. "ಓs, ಹೋಗಯ್ಯ ಹೋಗು. ಗುಲಾಬಿ ಹೂವಿಗೂ ನನಗೂ ಏನು ಸಂಬಂಧ ? ನಿನ್ನೊಡನೆ ಮಾತನಾಡಲಿಕ್ಕೂ ವೇಳೆಯಿಲ್ಲ ಹೋಗು. ಇನ್ನಾರನ್ನಾದರೂ ಕೇಳಿ ನೋಡು" ಎಂದು ನುಡಿದು ಒಳಸೇರಿತು.

ತುಸು ಮುಂದೆ ಹೋದ ಮೇಲೆ ಆ ಜೇನ್ನೊಣವು ಒಂದು ಬಲೆ ಕಟ್ಟು ತ್ತಿರುವ ಜೇಡನನ್ನು ಕಂಡಿತು. ಗುಲಾಬಿ ಹೂವಿಗೆ ಏನು ಬೇಕಾಗಿದೆಯೆಂದು ಕೇಳಿತು. ಆಗ ಆ ಜೇಡನು, "ಅದಕ್ಕೆ ಒಂದು ನೊಣವು ಬೇಕಾಗಿದ್ದೀತು" ಎಂದು ನುಡಿಯಿತು. ತನ್ನಂತೆಯೆ ಪರರೆಂದು ತಿಳಿಯುವ ಈ ಜೇಡನ ಮಾತಿಗೆ ಕಿವಿಗೊಡುವವರೇ ಮೂರ್ಖರು ಎನ್ನುತ್ತ, ಆ ಜೇನು ಹುಳುವು ಮುಂದೆ ಸಾಗಲು ಅದರ ಕಣ್ಣಿಗೆ ಮೋಡವೊಂದು ಕಂಡಿತು. ಅದೇ ರೀತಿ ಯಾಗಿ ಮೋಡವನ್ನು ಪ್ರಶ್ನೆ ಮಾಡಲು, "ಹೂವಿಗೇನು ? ಅದಕ್ಕೆ ಮಳೆ ಹನಿ ಬೇಕಾಗಿದ್ದೀತು" ಎಂದಿತು. ಜೇನ್ನೊಣಕ್ಕೆ ನಿಜವೆಂದು ತೋರಿ, ನೀರ

ಹನಿಗಳನ್ನು ಒಯ್ದು ಗುಲಾಬಿ ಹೂವಿಗೆ ಅರ್ಪಿಸಲು "ಅಯ್ಯೋ ! ಹುಚ್ಚು ಹುಳವೇ, ನೀರು ಬೇಕಾದರೆ ನಾನು ಆಕಾಶದಿಂದಲೂ ಕೆಳಗಿನ ಜಲಾಶಯದಿಂದಲೂ ಪಡೆವೆ. ನಿನ್ನಿಂದಲ್ಲ" ಎಂದು ಅಟ್ಟಿಹಾಕಿತು.

ಜೇನ್ನೊಣವು ಮತ್ತೆ ಗುಯ್‌ಗುಡುತ್ತ, ಹೊರಡಲು, ಒಂದು ಗಿಡದ ಟೊಂಗೆಯ ಮೇಲೆ ಕಣ್ಣು ಮುಚ್ಚಿ ಕುಳಿತಿದ್ದ ಒಂದು ಗೂಗೆಯನ್ನು ಕಂಡಿತು. ಆಗ ಜೇನುಮರಿಯು ಅದರ ಸುತ್ತು ಸುಳಿದಾಡಿ, ಗುಯ್‌ಗುಟ್ಟಿ, "ಗೂಗೆಯೇ, ನಾನು ಜೇನ್ನೊಣ ಬಂದಿದ್ದೇನೆ. ನನ್ನ ಗುಲಾಬಿ ಹೂವಿಗೆ ಏನು ಬೇಕಾಗಿದ್ದೀತು" ಎಂದಿತು. ಗೂಗೆಯು "ಅದಕ್ಕೆ ಬೇಕು ನಿದ್ದೆ" ಎಂದಿತು. ಪ್ರಕೃತಿಯಿಂದ ಇತರ ಎಲ್ಲ ಅನುಕೂಲತೆಗಳಿರುವ ಹೂವಿಗೆ ಇದೇ ಬೇಕಾಗಿದ್ದೀತು ಎಂದು, ಸಂತೋಷದಿಂದ ಆ ಜೇನುಹುಳವು ಮತ್ತೆ ಗುಲಾಬಿ ಹೂವಿನೆಡೆಗೆ ಬಂದು, "ನೀನು ನಿದ್ದೆಯನ್ನೇ ಮಾಡಿಲ್ಲ. ನಾನು ನಿನಗೆ ಮೃದುವಾಗಿ ಜೋಗುಳ ಹಾಡುವೆ. ನನ್ನ ರೆಕ್ಕೆಗಳಿಂದ ಗಾಳಿ ಹಾಕುವೆ" ಎಂದಿತು. ಆಗ ಹೂವು "ನನಗೆ ನಿದ್ರೆ ಬರುವುದು ರಾತ್ರಿಯಿಂದಾಗಿ. ನಿನ್ನಿಂದಲ್ಲ ಹೋಗು, ಹೋಗು. ಮರಳಿ ಯತ್ನವ ಮಾಡು" ಎಂದು ಅಟ್ಟಿ ಹಾಕಿತು.

ಆಗ ಜೇನ್ನೊಣವು ನಿರಾಶೆಯ ಸಿಟ್ಟಿನಿಂದ ಗುಯ್‌ಗುಡುತ್ತ ದಿಕ್ಕುಗೇಡಿಯಂತೆ ಅಲೆಯುತ್ತಿತ್ತು. ನಿಸರ್ಗದ ಸಸ್ಯ ಪ್ರಾಣಿಗಳ ಭಾಷೆಯನ್ನು ಅರ್ಥಮಾಡಿಕೊಳ್ಳುವ ಓರ್ವ ತಪಸ್ವಿಯ ಹೆಂಡತಿಯು, ಅದರ ಅಳಲನ್ನು ಕಂಡು ಮರುಗಿ ಆ ಜೇನುಹುಳವನ್ನು ಕರೆದು, ಗುಲಾಬಿ ಹೂವಿಗೆ ಏನು ಬೇಕಾಗಿದೆಯೆಂಬುದನ್ನು ಹೇಳಿಕೊಟ್ಟಳು. ಅದನ್ನು ಕೇಳಿ ಆ ಭೃಂಗವು ಸಂತೋಷಾತಿಶಯದಿಂದ ಶರವೇಗಧಾರಿಯಾಗಿ ಗುಲಾಬಿ ಹೂವಿನೆಡೆಗೆ ಬಂದು, ಅದಕ್ಕೆ ಬೇಕಾಗಿದ್ದುದನ್ನು ಕೊಟ್ಟಿತು. ಆಗ ಆ ಪುಷ್ಪವು ತನ್ನಲ್ಲಿಯ ಮಕರಂದವನ್ನು ಹೀರಗೊಟ್ಟಿತು. ಈಗ ಹೇಳು ದೇವಿ, ಜೇನ್ನೊಣವು ಆ ಹೂವಿಗೆ ಏನನ್ನು ಕೊಟ್ಟಿತೆಂದು.

ಇಷ್ಟು ನುಡಿದು ರಸಕೋಶನು ಸುಮ್ಮನಾದನು. ಆಗ ಅನಂಗ-ರಾಗಿಣಿಯು ದಿನದಂತೆ ಕೂಡಲೆ ಉತ್ತರ ಹೇಳದೆ, ಒಂದು ಕ್ಷಣ ಲಜ್ಜಾವನತ-

ಮುಖಿಯಾದಳು. ರಾಜನ ಹೃದಯವು ಆ ಗಳಿಗೆಗೆ ಚಟಪಟನೆ ಒದ್ದಾಡಿತು. ಮರುಕ್ಷಣಕ್ಕೆ ಆ ಭೃಂಗಲೋಚನೆಯು "ಒಂದು ಮುದ್ದು ಕೊಟ್ಟಿತು" ಎಂದಳು. ಇಷ್ಟು ಹೇಳಿ ಆ ನಾಗಭೂಷಿತೆಯು ಹೊರಡಲನುವಾದಳು. ರಾಜನತ್ತ ನೋಡದೆ ಮುಂದೆ ಸಾಗಿದಳು. ಆದರೂ ರಾಜನ ಹೃದಯವು ಅವಳ ಹಿಂದೆಯೇ ಧಾವಿಸಿತು. ರಸಕೋಶನು ಅವಸರಪಡಿಸುತ್ತ ರಾಜನನ್ನು ಸಂಗಡ ಕರೆದೊಯ್ದನು.

## ಸಪ್ತಮ ದಿವಸ

ರಾಜನು ಮಿತ್ರನನ್ನು ಕುರಿತು, "ರಸಕೋಶನೆ, ಎರಡೇ ದಿನಗಳುಳಿದುವಲ್ಲ ? ಇನ್ನೇನು ಗತಿ ? ಇಷ್ಟು ಸಮೀಪವರ್ತಿನಿಯಾಗಿದ್ದರೂ ನನಗೆ ಅಲಭ್ಯಳಾಗಿ ತೋರುತ್ತಿದ್ದಾಳಲ್ಲ. ನೀನು ಎಷ್ಟೇ ಜಾಣತನದಿಂದ ಸಮಸ್ಯೆಗಳನ್ನೊಡ್ಡಿದರೂ, ಆಕೆ ಕ್ಷಣಮಾತ್ರದಲ್ಲಿ ಅವನ್ನೆಲ್ಲ ಪರಿಹರಿಸಿದಳಲ್ಲ, ಆಹಾ ! ಇಂದು ಅವಳು ನನ್ನೆಡೆ ನೋಡದಿದ್ದರೂ, ಅವಳ ಮುಖಬಿಂಬವು ನನ್ನ ಮನಸ್ಸಿನಲ್ಲಿ ನಟ್ಟು ಹೋಗಿದೆ. ಅವಳ ಇಂದಿನ ಆ ಲಜ್ಜಾವಿಲಾಸ, ರೂಪವಿನ್ಯಾಸಗಳ ಮುಂದೆ, ಈ ಅವಳ ಚಿತ್ರವು ನನ್ನಲ್ಲಿ ಜುಗುಪ್ಸೆ ಮೂಡಿಸುವಂತಾಗಿದೆ. ಅದನ್ನು ನೋಡುವ ಅಪೇಕ್ಷೆಯೆಲ್ಲ ಅಟ್ಟಿಸಿಹೋಗಿದೆ" ಎಂದು ಗೋಗರೆಯುತ್ತ ಅನಂಗರಾಗಿಣಿಯ ಚಿತ್ರವನ್ನು ಬದಿಗಿರಿಸಿ, ಬಹು ದುಃಸಹದಿಂದ ರಾತ್ರಿಯನ್ನು ಕಳೆದನು.

ಸೂರ್ಯನು ಅಸ್ತಮಿಸುವುದೊಂದೇ ತಡ. ರಸಕೋಶನನ್ನು ಹೊರಡಿಸಿಕೊಂಡು, ಆಮೋದಹರ್ಮ್ಯಕ್ಕೆ ಬಂದನು. ತನ್ನ ಮನದನ್ನೆಯನ್ನು ದಿಟ್ಟಿಸಿ ನೋಡುವ ಧೈರ್ಯ ತೋರಿದನು. ರಸಕೋಶನು ಇಂದಾದರೂ ಅವಳನ್ನು ನಿರುತ್ತರಳನ್ನಾಗಿಸುವ ಸಮಸ್ಯೆಯನ್ನು ಹೇಳಬಹುದೆ ಎಂದು ಕಾಯುತ್ತ ಕುಳಿತನು. ಇತ್ತ ರಸಕೋಶನು ಅವಳಿಗೆ ವಂದಿಸಿ ಹೇಳತೊಡಗಿದನು :

ದೇವೀ, ಓರ್ವ ಪ್ರೇಮಿಯು ಆದೇ ತಾನೇ ಅಸುವನ್ನು ನೀಗಿದ ತನ್ನ ಕಾಂತೆಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ದುಃಖಿಸುತ್ತಿದ್ದನು. ತನ್ನ ವಿಲಾಪ-ಭರದಲ್ಲಿ ಅವನು, "ಸಾವಿನ ಮುಂದೆ ಯಾರು ನಿಂತಾರು ?

ಆದರೆ ಸಾವಿಗಿಂತ ಗಟ್ಟಿಯಾದದ್ದು ಪ್ರೇಮ! ಅದೇ ಚಿರಂತನ, ಅದರಿಂದಾಗಿಯೇ ನಾನು ಜನ್ಮಾಂತರಗಳ ವರೆಗೂ ಬದುಕಿರಬಲ್ಲೆ" ಎಂದನು. ಅದನ್ನು ಕೇಳಿದ ಯಮರಾಜನು ನಕ್ಕು, ಕಾಮದೇವನನ್ನು ಕುರಿತು, ಕೇಳಿದೆಯಾ ಅವನ ಅಪಲಾಪವನ್ನು" ಎಂದನು. ಆಗ ಮನಸಿಜನಾದ ಮಕರಧ್ವಜನು, "ಇಲ್ಲ. ಅವನು ಸತ್ಯವನ್ನೇ ಹೇಳಿದ್ದಾನೆ. ಪ್ರೇಮವೇ ಅಮರ ಹಾಗು ಚಿರಂತನ. ನಾನೇ ಗಟ್ಟಿಗ" ಎಂದನು. ಆಗ ಇಬ್ಬರಲ್ಲಿಯೂ ಯಾರು ಬಲಶಾಲಿಗಳೆಂದು ಜಗಳ ಹುಟ್ಟಿತು. ಅಲ್ಲಿಂದ ಕಾಮದೇವನು ಹೇಳಿದನು : "ಯಾಕೆ ಸುಮ್ಮನೇ ಬಾಯಿಮಾತಿನ ಜಗಳ ? ನಮ್ಮ ನಮ್ಮ ಶಕ್ತಿಯನ್ನು ಪ್ರಯೋಗ ಮಾಡಿಯೇ ನೋಡೋಣ". ಅದಕ್ಕೆ ಯಮಧರ್ಮರಾಯನು ಒಪ್ಪಲು, ಪ್ರಯೋಗಾರ್ಥವಾಗಿ ಒಂದು ಸಜೀವ, ಇನ್ನೊಂದು ನಿರ್ಜೀವ ವಸ್ತುವನ್ನು ಆಯ್ದುಕೊಳ್ಳತಕ್ಕದೆಂದು ನಿರ್ಣಯವಾಯಿತು. ಅದಕ್ಕೆ ಕಾಮದೇವನು ಯುದ್ಧವೀರನನ್ನೂ ನ್ಯಗ್ರೋಧ ವೃಕ್ಷವನ್ನೂ ಸೂಚಿಸಿದನು. ಅದಕ್ಕೆ ಯಮರಾಯನು ಸಮ್ಮತಿಸಿದನು.

ಆ ಪ್ರಕಾರ ಯಮನು ಮೊದಲು ಆ ಆಲದ ಮರದ ಹತ್ತಿರ ಹೋಗಿ, ತನ್ನ ಗದೆಯಿಂದ ಅದರ ಬೇರುಗಳನ್ನು ಸಾಯಹೊಡೆದು, ಅದನ್ನು ಕ್ಷಣಾರ್ಧದಲ್ಲಿ ನೆಲಕುರುಳಿಸಿದನು. ಆದರೆ ಕಾಮದೇವನು ಮರುಕ್ಷಣದಲ್ಲಿಯೆ, ಆಲದ ಮರದ ಟೊಂಗೆಗಳಿಂದ ಇಳಿಬಿದ್ದ ಬೇರುಗಳು ಚಿಗಿಯುವಂತೆ ಮಾಡಿದನು. ಯಮನು ಈ ಹೊಸ ಗಿಡಗಳನ್ನು ಕಡಿದಷ್ಟೂ ಟೊಂಗೆಗಳ ಇಳಿಬಿದ್ದ ಬೇರುಗಳು ಅದರ ಹತ್ತುಪಟ್ಟು ಸಂಖ್ಯೆಯಲ್ಲಿ ಚಿಗಿತು ನಿಂತವು. ಕೊನೆಗೆ ಬೇಸತ್ತು ಯಮನು ಅದನ್ನು ಅಲ್ಲಿಗೇ ಬಿಟ್ಟುಕೊಟ್ಟ. ಕೂಡಲೇ, ಕಾಮದೇವನು, "ನೋಡು, ಯಾರು ಗೆದ್ದರು ?" ಎಂದು ಹಾಸ್ಯ ಮಾಡಿದನು.

"ಸ್ವಲ್ಪ ತಾಳು" ಎಂದು ಹೇಳಿ ಯಮನು, ಯುದ್ಧ ಮಾಡುತ್ತಿದ್ದ ವೀರನ ಹತ್ತಿರ ಹೋದನು. ತನ್ನ ಪಾಶದಿಂದ ಅವನ ಪ್ರಾಣಹರಣ ಮಾಡಿದನು. ಆಗ ಕಾಮದೇವನು ಆ ವೀರನ ಅನುಚರರಲ್ಲಿ ಅವನ ಬಗ್ಗೆ ಅತೀವ ಗೌರವ ಹುಟ್ಟುವಂತೆ ಮಾಡಿದನು. ಅವನ ದೇಶದ ಜನರು ಅವನಿಗಾಗಿ ಸ್ಮಾರಕ ಮಂದಿರಗಳನ್ನು ರಚಿಸಿದರು, ಗೀತಗಳನ್ನು ರಚಿಸಿ ಹಾಡಿದರು.

ತಾಯಂದಿರು ತಮ್ಮ ಮಕ್ಕಳಿಗೆ ಅವನ ಹೆಸರನ್ನು ಇಟ್ಟರು. ಮಂದಿರಗಳಲ್ಲಿ ಅವನ ಮೂರ್ತಿಯನ್ನು ಪ್ರತಿಷ್ಠಾಪಿಸಿ ಪೂಜಿಸಿದರು. ಆಗ ಕಾಮದೇವನು ಯಮರಾಜನನ್ನು ಕುರಿತು, "ಈಗಾದರೂ ಒಪ್ಪುವಿಯಲ್ಲವೆ, ನಾನು ಬಲಶಾಲಿಯೆಂದು" ಎಂಬುದಾಗಿ ಅಟ್ಟಹಾಸದಿಂದ ಹೇಳಿಧನು. ಅದಕ್ಕೆ ಯಮನು, "ಪಣವು ಎಷ್ಟೇದರೂ ಪಣವೇ. ಸತ್ಯವಲ್ಲ. ನಿಶ್ಚಯವಾಗಿ ನಾನೇ ಬಲಶಾಲಿಯು. ಆ ಪ್ರೇಮಿಯು ಸುಮ್ಮನೆ ಗಳಹುತ್ತಾನೆ" ಎಂದನು. ಈಗ ಹೇಳು ದೇವಿ, ಯಾರ ಮಾತು ಸರಿಯಾದುದು ?

ಇಷ್ಟು ಹೇಳಿ ರಸಕೋಶನು ಸುಮ್ಮನಾದನು. ಅನಂಗರಾಗಿಣಿಯು ಉತ್ತರ ಹೇಳದೆ ಸುಮ್ಮನೆ ಕುಳಿತಳು. ಅವಳ ಮುಖಕಮಲವು ಬಾಡಿತು. ಮನಸ್ಸಿನ ನಿರ್ಧಾರವನ್ನು ಸೂಚಿಸುವಂತೆ ಕಣ್ಣುಗಳು ಚಂಚಲವಾದುವು. ಆದರೂ ಸಾವರಿಸಿಕೊಂಡು ಕೆಳದನಿಯಲ್ಲಿ ಉತ್ತರಿಸಿದಳು. "ಯಮರಾಯನು ಧರ್ಮರಾಯನೇ ಸರಿ. ಕಾಮದೇವನು ಎಷ್ಟೆಂದರೂ ಕುಟಿಲಮತಿಯು. ಅಂತೆಯೇ ಅವನು ತನಗೆ ಅನುಕೂಲವಾದ ಸಂಗತಿಗಳನ್ನೇ ಪ್ರಯೋಗಾರ್ಥವಾಗಿ ಆಯ್ದುಕೊಂಡನು. ಕೆಲವು ಪ್ರಸಂಗಗಳಲ್ಲಿ, ಅವನೇ ಬಲಶಾಲಿಯಾಗಿ ತೋರಬಹುದು. ಏನಿದ್ದರೂ ವಿಶಾಲವಾದ ಅರ್ಥದಲ್ಲಿ, ಅಂತ್ಯ ವಿಚಾರದಲ್ಲಿ ಯಮಧರ್ಮನೆ ಬಲಶಾಲಿಯೆಂಬುದು ಜಗತ್ಪ್ರಸಿದ್ಧವಿದೆ. ಅವನು ಅನಂತನೂ ಕಾಲಾತೀತನೂ ಧರ್ಮಸಾಕ್ಷಾತ್ಕಾರಿಯೂ ಆಗಿದ್ದಾನೆ" ಎಂದಳು.

ಉತ್ತರ ಹೇಳಿದ ಮೇಲೂ ಅವಳ ಮುಖ ಕಮಲವು ಬಾಡಿಯೇ ಇದ್ದಿತು. ಆಕೆ ಹೊರಟು ನಿಂತಳು. ಅವಳ ಮನಸ್ಸಿನ ಅಸಹಾಯತೆ, ನಿರಾಶೆಯ ಭಾವ ಅವಳ ಸಾಗಲಾರದ ನಡಿಗೆಯಲ್ಲಿ ವ್ಯಕ್ತವಾಗಿದ್ದಿತು. ರಾಜನ ಹೃದಯವು ಮತ್ತೆ ಅವಳೆಡೆಗೆ ಧಾವಿಸಿತು. ರಸಕೋಶನು ರಾಜನನ್ನು ಬಲವಂತದಿಂದ ಎಬ್ಬಿಸಿ ತಮ್ಮ ನಿವಾಸಕ್ಕೆ ಕರೆದೊಯ್ದನು.

## ಅಷ್ಟಮ ದಿವಸ

ಸೂರ್ಯಕಾಂತ ರಾಜನು ರಸಕೋಶನನ್ನು ಕುರಿತು, ಮಿತ್ರನೇ, ಇನ್ನೂ ನಿನಗೆ ಆಸೆಯಿದೆಯೆ ? ನಾನಂತೂ ನನ್ನ ಸುಖಕ್ಕೆ ನೀರು ಬಿಟ್ಟುಬಿಟ್ಟೆನು. ಇನ್ನು ಒಂದು ದಿನ, ಒಂದೇ ದಿನ ನನ್ನ ಪಾಲಿಗೆ ಉಳಿಯಿತು. ಈ ಏಳು

ದಿನಗಳನ್ನು ವ್ಯರ್ಥವಾಗಿ ಕಳೆದದ್ದಕ್ಕಾಗಿ ನಿನ್ನ ಮೇಲೆ ನನ್ನ ಕೋಪವು ಉರಿಯುತ್ತಿದೆ. ಆದರೆ ನಿರ್ವ್ಯಾಜ ಬುದ್ಧಿಯಿಂದ ನೀನು ನನಗಾಗಿ ಪ್ರಯತ್ನಿಸಿದೆಯೆಂದು ನಾನು ಬಲ್ಲೆ. ಅಂತೆಯೇ ನಿನ್ನನ್ನು ಕ್ಷಮಿಸಿದ್ದೇನೆ. ಅವಳ ಬುದ್ಧಿಮತ್ತೆಯು ಇಷ್ಟೊಂದು ಅಲೌಕಿಕವೂ, ಅನನ್ಯಸಾಧಾರಣವೂ ಆಗಿರುವಾಗ ನಿನ್ನದೇನೂ ತಪ್ಪಿಲ್ಲ. ಆದರೆ ಉಳಿದೇಳು ದಿನಗಳ ವರೆಗೆ ಆದಂತೆ, ನಾಳೆಯೂ ಆಕೆ ಉತ್ತರ ಹೇಳಿಬಿಟ್ಟರೆ ನನ್ನದೆಲ್ಲ ಮುಗಿದಂತೆಯೇ. ಅವಳ ಬುದ್ಧಿ ಹಾಗೂ ರೂಪಗಳ ಹಿರಿಮೆಯಲ್ಲಿ ಕಿಂಚಿತ್ತಾದರೂ ನ್ಯೂನತೆ ಯಿದ್ದಿದ್ದರೆ, ನಾನಿಷ್ಟು ಕಷ್ಟಪಡಬೇಕಾಗಿಯೇ ಇರಲಿಲ್ಲ. ಹಾಯ್ ಮಿತ್ರಾ, ಅವಳ ವ್ಯಕ್ತಿತ್ವವು ನನ್ನಲ್ಲಿ ಸರ್ಪದಂಶವಾದಂತಾಗಿ, ನನ್ನ ಮೃತ್ಯುಕಾಲವೇ ಸನ್ನಿಹಿತವಾಗಿದೆ. ನಾಳೆ ಅವಳು ಹೇಳುವ ಉತ್ತರವೆಂದರೆ, ನನ್ನ ಸಾವಿನ ವಿಧಿವಚನವೇ ಸರಿ" ಎಂಬುದಾಗಿ ರಾತ್ರಿಯಿಡೀ ಚಿಂತಿಸಿದನು.

ಸೂರ್ಯನು ಉದಯಿಸಿದನು. ಸೂರ್ಯಕಾಂತನು ತನ್ನ ಮಿತ್ರನೊಡನೆ ಉದ್ಯಾನದಲ್ಲಿ ವಿಹರಿಸುತ್ತ ಅನಂಗರಾಗಿಣಿಯ ಸಮಸ್ಯೆಯಲ್ಲಿಯೇ ಮಗ್ನನಾಗಿದ್ದನು.

"ಇಲ್ಲ ರಸಕೋಶ, ನಾವು ಪ್ರಯತ್ನ ಮಾಡಲೇಬೇಕು. ಅಂದಹಾಗೆ ಅವಳೇಕೆ ನಿನ್ನೆ ನಿನ್ನ ಸಮಸ್ಯೆಗೆ ಬೇಗ ಉತ್ತರ ಹೇಳಲಿಲ್ಲ ? ಅವಳಿಗೆ ಉತ್ತರ ಗೊತ್ತಿರಲಿಲ್ಲವೆಂದೇ ? ಅಲ್ಲ. ಮತ್ತು ಅವಳ ಮುಖವು ಎಷ್ಟೊಂದು ಬಾಡಿ ಹೋಗಿದ್ದಿತಲ್ಲ !- ಅದೇಕೆ, ಒಲ್ಲದ ಮನದಿಂದ ಆಕೆ ಮುಂದಡಿ ಇಡುತ್ತಿದ್ದಳು ? ....ಆಂ. ಅವಳೂ ನನ್ನನ್ನು ಪ್ರೀತಿಸುತ್ತಿರಬಹುದೆ ? ಕೊನೆಯ ದಿನ ಸಮೀಪಿಸಿತೆಂದು ನನ್ನ ಹಾಗೆಯೇ ಅವಳೂ ಚಿಂತೆಗೊಳ ಗಾದಳೆ ? ಇನ್ನು ನನ್ನನ್ನು ಕಳೆದುಕೊಳ್ಳಬೇಕಾಗುವುದೆಂದು ಅವಳಿಗೂ ಅನಿಸಿರಬೇಕು ! ಹೌದು. ನಿನ್ನೆ ಅವಳು ಉತ್ತರ ಹೇಳುವಾಗ ತಡವರಿಸಿದಳು. ಯಾಕೆ ತಡವರಿಸಿದಳು ಗೊತ್ತೇ ರಸಕೋಶ? ತನ್ನ ಉತ್ತರದಿಂದ ಕಾಮ ದೇವನಿಗೆ ಅಪ್ರಿಯುಳಾಗುವೆನೆಂಬ ಭಾವನೆಯಿಂದ ಅವಳ ನಾಲಗೆ ವಚಃಶಕ್ತಿ ಯನ್ನು ಕಳೆದುಕೊಂಡಿತು. ಹೌದು ನಿಸ್ಸಂದಿಗ್ಧವಾಗಿ ಅವಳೂ ನನ್ನನ್ನು ಪ್ರೀತಿಸುತ್ತಾಳೆ. ಇಬ್ಬರನ್ನೂ ಈ ಸಮಸ್ಯೆಯಿಂದ ಮುಕ್ತಮಾಡುವ ಉಪಾಯವನ್ನು ನಾನು ಹುಡುಕಿಯೇ ತೀರುವೆ. ವೀಣಾಪಾಣಿ ಶಾರದೆ,

ಎಲೈ ಸರಸ್ವತೀ, ನನ್ನ ಮೇಲೆ ಕೃಪೆಮಾಡು !" ಎಂದು ತನ್ನಷ್ಟಕ್ಕೆ ಪ್ರಾರ್ಥನೆಯಲ್ಲಿ ಮಗ್ನನಾದನು. ಆ ದಿನಕ್ಕೆ ಯಾವ ಕಥೆ ಹೇಳಬೇಕು ಎಂದು ಯೋಚಿಸುವುದಕ್ಕೆಂದು ರಸಕೋಶನು ಬೇರೊಂದು ಗಿಡದ ಮರೆಯನ್ನು ಆಶ್ರಯಿಸಿದನು.

ಆಗ ಸರಸ್ವತಿಯು ಅವನ ಪ್ರಾರ್ಥನೆಗೆ ಓಗೊಟ್ಟು ಮನ್ನಿಸಿದಳು. ಸೂರ್ಯಕಾಂತನ ಮಿದುಳಿನಲ್ಲಿ ಮಿಂಚಿನ ಸಂಚಾರವಾಯಿತು.

"ಹೊಳೆಯಿತು ! ಹೊಳೆಯಿತು ! ರಸಕೋಶಾ ಎಲ್ಲಿದ್ದೀ ಬಾ. ಇನ್ನೇನು ತಲೆಕೆಡಿಸಿಕೊಳ್ಳಬೇಡ. ನಾನೇ ಈ ದಿನ ಅವಳಿಗೆ ಪ್ರಶ್ನೆ ಹಾಕುವೆ. ಅದಕ್ಕೆ ಆಕೆ ಉತ್ತರವನ್ನು ಹೇಳಲು ಸಾಧ್ಯವೇ ಇಲ್ಲ" ಎಂದನು.

"ರಾಜನೇ, ನಿನಗೆ ನನ್ನ ಅಭಿವಂದನೆಗಳು. ಆದರೆ ಉತ್ಸಾಹದ ಭರದಲ್ಲಿ ನಮ್ಮ ಗುರಿ ತಪ್ಪಲಾಗದು. ಆ ಕಾರಣ ನಿನ್ನ ಸಮಸ್ಯೆಯೇನೆಂಬುದನ್ನು ನನಗೆ ಹೇಳು. ಅದರ ಸಾಧಕ-ಬಾಧಕಗಳನ್ನು ವಿಚಾರಿಸಿ ನಾಗಪುತ್ರಿಯ ಮುಂದೆ ಮಂಡಿಸೋಣ" ಎಂದನು.

ಸೂರ್ಯಕಾಂತನು ಸಂತೋಷದ ನಗೆಯನ್ನು ಸೂಸಿ ಹೇಳಿದನು. "ಮಿತ್ರನೇ, ನಿನ್ನ ಸಂಶಯು ಅಕಾರಣವಾದುದು. ಆದರೂ ನೀನು ನನ್ನ ಗೆಳೆಯನಾದ್ದರಿಂದ ಈ ವಿಷಯುವನ್ನು ನಿನಗೆ ಮುಂಚಿತ ಹೇಳಲೇಬೇಕು. ಏನೆಂದರೆ ನನ್ನ ಸಮಸ್ಯೆಯನ್ನೇ ನಾನು ಅವಳ ಮುಂದಿರಿಸುತ್ತೇನೆ. ಇಂಥ ಒಂದು ಸ್ಥಿತಿಯಲ್ಲಿ ನಾನೇನು ಮಾಡಬೇಕು ಎಂದೇ ಅವಳನ್ನು ಕೇಳುತ್ತೇನೆ. ಅದಕ್ಕೆ ಅವಳು ನನಗೆ ಪರಿಹಾರ ಹೇಳಿದರೆ, ಅವಳು ಹೇಳಿಕೊಟ್ಟ ಸಮಸ್ಯೆಯನ್ನು ಅವಳಿಗೇ ಮತ್ತೆ ಕೇಳಿಬಿಡುತ್ತೇನೆ. ಒಂದು ವೇಳೆ ಇಂದು ಅವಳು ಪರಿಹಾರ ಹೇಳದಿದ್ದರೆ, ಆವಾಗಲೂ ನಾನು ಗೆದ್ದೆ. ಎಂತಿದ್ದರೂ ಆಕೆ ನನ್ನ ಬಲೆಯಲ್ಲಿ ಬೀಳುವಳು" ಎಂದನು.

ಆಗ ರಸಕೋಶನೂ ಸಂತೋಷಪಟ್ಟು "ರಾಜನೇ, ನಿಜವಾಗಿಯೂ ಇದು ಸ್ತುತ್ಯ ಉಪಾಯುವೇ ಆಗಿದೆ. ಅಂತೂ ಈ ಪ್ರೇಮದ ರೀತಿ ಎಷ್ಟೊಂದು ವಿಚಿತ್ರ ! ಮೊದಲು ನಿನ್ನನ್ನು ಮೂಢನನ್ನಾಗಿ ಮಾಡಿ ಬಂದ್ಧಿ

ಶಕ್ತಿಯನ್ನು ಕ್ಷೀಣಗೊಳಿಸಿಬಿಟ್ಟಿತ್ತು. ಈಗ ಅದೇ ಪ್ರೇಮವು ನಿನ್ನ ಬುದ್ಧಿ ಶಕ್ತಿಯನ್ನು ಹರಿತಗೊಳಿಸಿತೆಂದೇ ನಿನಗೇ ಉಪಾಯವು ಹೊಳೆಯಿತು. ದಾರಿಯಲ್ಲಿಯೆ ಬಿದ್ದ ವಸ್ತುವಿನಂತೆ ಈ ಉಪಾಯವು ನಮ್ಮ ಕಣ್ಣರಿಕೆಯಲ್ಲಿದ್ದರೂ ಗೋಚರವಾಗಿರಲಿಲ್ಲ. ರಾಜನೇ, ಇದೇ ಪ್ರೇಮವು ಇಂದು ಆ ನಾಗಕುವರಿಯನ್ನೂ ಕಟ್ಟಿ ಹಾಕಿ, ಅವಳನ್ನು ನಿರುತ್ತರಳನ್ನಾಗಿ ಮಾಡುವುದು, ಯಾಕೆಂದರೆ ಬೇಕೆಂದೇ ಬಲೆಯಲ್ಲಿ ಬೀಳಬೇಕೆನ್ನುವವರನ್ನು ಹಿಡಿಯುವುದು ಅದಾವ ದೊಡ್ಡ ಮಾತು? ಯಾವ ಸ್ತ್ರೀ ನನ್ನ ಕಥನ-ಸಮಸ್ಯೆಗಳಿಗೆ ಕಠಿಣವಾಗಿ ಉತ್ತರಿಸಿದಳೋ, ಇಂದು ಅದೇ ಲಲನೆಯು ನಿನ್ನೊಡನೆ ಹೂವಿಗಿಂತ ಹಗುರಾಗಿ ವರ್ತಿಸಬಹುದು" ಎಂದನು.

ಇತ್ತ ಸೂರ್ಯಕಾಂತ ರಾಜನು ಯಾವಾಗ ಸೂರ್ಯಾಸ್ತವಾದೀತೋ ಎಂದು ದಿನಕ್ಕಿಂತ ಹೆಚ್ಚಾಗಿ ತವಕಪಡುತ್ತಿದ್ದನು. ಆ ವೇಳೆ ಸಮೀಪಿಸಿದಾಗ ರಸಕೋಶನು, "ಮಿತ್ರನೇ, ಇಂದು ಅಮೋದಹರ್ಮ್ಯಕ್ಕೆ ನೀನೊಬ್ಬನೇ ಹೋಗು. ನಾನು ಬರದೇ ಇದ್ದರೆಯೆ ನಿನಗೆ ಹೆಚ್ಚು ಪ್ರಯೋಜನವಿದೆ. ಮಿತ್ರನು ಹತ್ತಿರಕ್ಕಿಂತ ದೂರವುಳಿದೇ ನೆರವನ್ನು ನೀಡಿದ್ದರ ಪ್ರಯೋಜನವು ಒಮ್ಮೊಮ್ಮೆ ಅತಿಶಯವಾಗುವುದು. ಇದಕ್ಕೊಂದು ಕಥೆಯನ್ನು ಹೇಳುವೆ ಕೇಳು —"

ಆಗ ರಾಜನು ಅವನನ್ನು ಅರ್ಧಕ್ಕೆಯೆ ತಡೆದು, "ಕ್ಷಮಿಸು ರಸಕೋಶ, ಈಗ ಬೇಡ. ನಿನ್ನ ಕತೆಯನ್ನು ಕೇಳುವುದಕ್ಕೆ ನನಗೆ ಆತುರವಿದ್ದರೂ ಈಗ ಬೇಡ. ಈ ದಿನ ನಿನ್ನನ್ನು ಬಿಟ್ಟು ನಾನೊಬ್ಬನೇ ಹೋಗುವುದಾದರೂ ನಿನ್ನನ್ನು ನಾನು ಅದೆಂತು ಮರೆಯಲಿ. ಈ ಎಂಟು ದಿನಗಳ ವರೆಗೆ ನಾನು ಪ್ರೇಮಮೂರ್ಛೆಯಿಂದ ಚೇತರಿಸಿಕೊಳ್ಳುವವರೆಗೂ ಕಥೆಗಳನ್ನು ಹೇಳಿ ವೇಳೆಯನ್ನು ಕಾಯ್ದೆ. ನನ್ನ ಜೀವವುಳಿಸಿದೆ. ಇಲ್ಲದಿದ್ದರೆ ಇತರರಂತೆ ನಾನು ಮೊದಲೆರಡು ದಿನಗಳಲ್ಲಿಯೆ ಗತಪ್ರಾಣನಾಗುತ್ತಿದ್ದೆ" ಎಂದನು.

"ಹೋಗಿ ಬಾ, ಮಿತ್ರಾ! ನನಗೂ ನಿನಗೆ ಕಥೆ ಹೇಳುವ ಇಚ್ಛೆ ವಿಶೇಷವಾಗಿರಲಿಲ್ಲ. ನನಗೆ ಕಥೆ ಹೇಳುವ ನಿಮಿತ್ತದಲ್ಲಿ ನಿನ್ನ ಪ್ರೇಯಸಿಯನ್ನು ವಿರಹವ್ಯಥೆಯಿಂದ ಬಳಲಿಸುವ ವಿಚಾರವಿತ್ತು. ಯಾಕೆಂದರೆ ಮಾರ್ಗ

ನಿರೀಕ್ಷೆಯು ಅವಧಿಯು ಹೆಚ್ಚಿದಂತೆ, ಪ್ರೇಮವು ಉತ್ಕಂಠಿತವಾಗುತ್ತದೆ. ಹೋಗಿ ಬಾ. ನಿನಗೆ ಶುಭವಾಗಲಿ" ಎಂದು ರಸಕೋಶನು ರಾಜನನ್ನು ಬೀಳ್ಕೊಟ್ಟನು.

ದಾರಿಯಲ್ಲಿ ರಾಜನ ಬಲಭುಜವು ಅದುರಿ ಶುಭವನ್ನು ಸೂಚಿಸಿತು. ಆಮೋದಹರ್ಮ್ಯಕ್ಕೆ ಅವನು ಬಂದಾಗ, ಅನಂಗರಾಗಿಣಿಯು ಬಾಗಿಲಿನಲ್ಲಿಯೆ ರಾಜನ ಬರವಿಗಾಗಿ ಕಾಯುತ್ತ ನಿಂತಿದ್ದಳು. ಅವನು ಬಂದೊಡನೆ, ಕೆಂಪು ಗುಲಾಬಿಯಂತೆ ಅವಳ ಕಪೋಲ ಕಾಂತಿ ಪಸರಿಸಿತು. ನಾಚಿ ಅವಳು ತನ್ನ ಸಿಂಹಾಸನದಲ್ಲಿ ಹೋಗಿ ಕುಳಿತುಕೊಂಡಳು.

ರಾಜನು ಅತಿ ಹತ್ತಿರದಲ್ಲಿ ಕುಳಿತುಕೊಂಡು ಆರಂಭಿಸಿದನು : "ದೇವೀ, ನಿನ್ನಂತೆಯೆ ನಾಗಸುಂದರಿಯಾದ ಓರ್ವ ರಾಜಕನ್ನಿಕೆಯನ್ನು ವರಿಸಲಪೇಕ್ಷಿಸಿ ರಾಜನೊಬ್ಬನು ಅವಳಲ್ಲಿಗೆ ಬಂದನು, ಆಗ ಆಕೆಯು ತಾನು ಉತ್ತರ ಹೇಳ ಲಾಗದ ಪ್ರಶ್ನೆಯನ್ನು ಅವನು ಹಾಕಿದಲ್ಲಿ ಮದುವೆಯಾಗುವೆನೆಂದು ಹೇಳಿ ದಳು. ಈಗ ಹೇಳು ದೇವೀ, ಅವನು ಆವಳಿಗೆ ಏನೆಂದು ಪ್ರಶ್ನೆ ಮಾಡ ಬೇಕು ?"

—ಇಷ್ಟು ಹೇಳಿ ರಾಜನು ಸುಮ್ಮನಾದನು. ಕ್ಷಣಾರ್ಧದಲ್ಲಿ ರಾಜನ ಕಥನದ ಮರ್ಮವನ್ನಾಕೆ ಅರಿತಳು. ಸೋತರೂ ಗೆದ್ದ ಆವಿರ್ಭಾವದಿಂದ ನಗೆಮಲ್ಲಿಗೆಯನ್ನು ಅರಳಿಸಿ, 'ಆದೊಂದೇ ನಾನು ಉತ್ತರಿಸಲಾಗದ ಸಮಸ್ಯೆ' ಎಂದು ನುಡಿದು ತಾನು ಧರಿಸಿದ್ದ ತುಂಬುಮಲ್ಲಿಗೆಯ ಮಾಲೆಯನ್ನು ಅವನ ಕೊರಳಿಗೆ ಹಾಕಿದಳು. ಆಗ ರಾಜನು ಅವಳ ಕೈಗಳನ್ನು ಹಿಡಿದುಕೊಂಡು, ಅವಳ ಕಿವಿಯಲ್ಲಿ ಉಸುರಿದನು– "ರಮಣೀಮಣೀ. ನನ್ನ ಮನೋಹಾರಿಣೀ, ನಿನ್ನ ಅಂಗಾಂಗಗಳಲ್ಲಿ ವ್ಯಾಪಿಸಿರುವ ನನ್ನ ಹೃದಯವನ್ನು ನನಗೆ ಮರಳಿ ಕೊಡುವಿಯಾ ?"

ಆಗ ಅನಂಗ, ಅಲ್ಲ, ಅಂಗರಾಗಿಣಿಯು ಕೆಳದನಿಯಲ್ಲಿ "ಸುಮ್ಮನೆ ಕೊಡುವುದೆ ? ಭೃಂಗವು ಗುಲಾಬಿಹೂವಿಗೆ ಏನನ್ನು ಕೊಟ್ಟಿತು ?" ಎಂದಳು. ಆಗ ಸೂರ್ಯಕಾಂತನು ಅವಳ ಗಲ್ಲವನ್ನು ಹಿಡಿದೆತ್ತಿ ಮೃದುವಾಗಿ ಮುತ್ತಿಟ್ಟನು. ಆ ಗಳಿಗೆಗೆ ಅವನು ಸಮಸ್ತ ವಿಶ್ವವನ್ನೇ ಮರೆತನು.

ತನ್ನ ಪ್ರಿಯತಮನಿಗೆ ಆಕೆ ಹೇಳಿದಳು : "ನನ್ನನ್ನು ಕಳೆದುಕೊಳ್ಳುವೆನೆಂದು ನೀವು ಅಂಜಿದ್ದಿರಾ ? ನಿಮ್ಮನ್ನು ಕಂಡ ಮರುದಿನದಿಂದಲೇ ನನ್ನ ಮನಸ್ಸು ನಿಮಗೆ ಮಾರುಹೋಯಿತು."

"ಎಲೌ ದುಷ್ಟಳೇ, ಹಾಗಿದ್ದರೆ ಇಷ್ಟು ದಿನ ಏಕೆ ನನ್ನ ಗೋಳು ಹುಯಿದುಕೊಂಡೆ ?" ಎಂದು ರಾಜನು ಕೇಳಿದನು. ಅನಂಗರಾಗಿಣಿಯು "ಅದು ನನಗೂ ತಾಪದಾಯಕವಾಗಿತ್ತು. ಆದರೂ ಹೆಂಗಸಿನ ರೀತಿಯೆ ಇದು ! ಪ್ರಿಯಕರನು ಕೇಳಿದುದನ್ನು ನಿರಾಕರಿಸಿ, ತಾವೂ ಒದ್ದಾಡುವುದು ನಮ್ಮ ಗುಣಧರ್ಮವೇ ಆಗಿದೆ" ಎಂದು ನುಡಿದಳು. "ಇರಲಿ, ಈ ಜಾಗದಿಂದ ನಾವು ಬೇಗ ಹೊರಡೋಣ. ಇಲ್ಲಿಯೇ ಇದ್ದರೆ ನಾನು ಪಟ್ಟ ಪರಿತಾಪ ಉಮ್ಮಳಿಸುತ್ತದೆ" ಎಂದು ರಾಜನು ಅವಳ ಕೈ ಹಿಡಿದುಕೊಂಡು ಹೊರಟನು.

ಸೂರ್ಯಕಾಂತನು ತನ್ನ ಮಿತ್ರನಾದ ರಸಕೋಶನನ್ನು ತನ್ನ ರಾಜಧಾನಿಯತ್ತ ಮುಂದೆ ಕಳುಹಿಸಿ, ತನ್ನ ಪ್ರಿಯತಮೆಯೊಡನೆ ಒಬ್ಬನೇ ಹೊರಟನು. ರಮ್ಯವಾದ ಅಡವಿಯ ದಾರಿ. ಶುಭ್ರವಾದ ಬೆಳದಿಂಗಳು. ದಿವಸದ ಹಗಲು, ಇರುಳುಗಳನ್ನು ಪ್ರತಿನಿಧಿಸುವಂತೆ ಅವನು ಬಿಳಿಯ ಕುದುರೆಯನ್ನೂ, ಆಕೆ ಕರಿಯ ಕುದುರೆಯನ್ನೂ ಏರಿ ಜೊತೆಜೊತೆಯಾಗಿ, ಮಂದವಾಗಿ ಮಾರ್ಗವನ್ನು ಕ್ರಮಿಸುತ್ತಿದ್ದರು. ಇಹಲೋಕ-ಪ್ರಪಂಚವನ್ನು ಮರೆಯಿಸುವಂತಿರುವ ಒಂದು ವನಪ್ರದೇಶದಲ್ಲಿ ಎಲೆ-ಹೂಗಳ ರಾಶಿ ಹರಡಿದ್ದಿತು. ಆ ಸ್ಥಳದಲ್ಲಿ ಅವಳನ್ನು ಗಾಂಧರ್ವರೀತಿಯಿಂದ ವಿವಾಹವಾದನು.

ಆನಂದಾತಿಶಯದಿಂದ ಹೃದಯವು ಬಿರಿಯುತ್ತಿರುವಾಗ ರಾಜನು ಹೇಳಿದನು : "ಆಹ್ ! ನನ್ನ ಜನ್ಮ ಸಾರ್ಥಕತೆ ಇಂದು ಆಯಿತು. ಇದನ್ನುಳಿದ ಎಲ್ಲವೂ ನಿಸ್ಸಾರವೆಂದು ನನಗೆ ತೋರುತ್ತದೆ. ಭವಿಷ್ಯತ್ತಿನಲ್ಲಿ ಈ ಪ್ರೇಮ ಸಮಾಗಮಕ್ಕಿಂತ ಹೆಚ್ಚಿನ ಸುಖವೇನೂ ನನಗೆ ಕಾಣುವುದಿಲ್ಲ. ಪರಮೇಶ್ವರನೇ, ಇದೇ ಸುಖವನ್ನು ನನಗೆ ಅನಂತವಾಗಿ ಉಳಿಯುವಂತೆ ಅನುಗ್ರಹಿಸಲಾರೆಯಾ ? ಇಲ್ಲಿಗೇ ನನ್ನ ಜನ್ಮಾಂತರದ ಪರಿಪಾಕವು ಫಲ ಕೊಡದಿದ್ದರೂ ಅಡ್ಡಿಯಿಲ್ಲ. ಇಲ್ಲವೆ ಕಾಲವೆಂಬುದು ನಮ್ಮ ಮಟ್ಟಿಗೆ ನಿಂತು ಬಿಡಲಿ !" ಅವನ ಪ್ರೇಯಸಿಯೂ ಅದಕ್ಕೆ ಹೂಗುಟ್ಟಿದಳು.

ಚಂದ್ರಭೂಷಣನಾದ ಶಿವನು ಅವನ ಹೃದಯವಾಣಿಯನ್ನು ಕೇಳಿ, ಆದರಂತೆ ಅನುಗ್ರಹಿಸಿದನು. ಒಬ್ಬರೊಬ್ಬರ ತೋಳತೆಕ್ಕೆಯಲ್ಲಿ ಅವರು ಮೈ ಮರೆತಾಗ, ಶಿವನು ತನ್ನ ಫಾಲನೇತ್ರದಿಂದ ಕಿಡಿಯೊಂದನ್ನು ಅವರೆಡೆಗೆ ಚೆಲ್ಲಿದನು. ಅವರ ದೇಹಗಳು ಆ ಕ್ಷಣಕ್ಕೆ ನಿರ್ನಾಮವಾದರೂ ಅವರ ಜೀವ-ಜೋಡಿಯು ಅಂಡಲೆಯತೊಡಗಿತು. ಮುಂದಣ ಜನ್ಮದಲ್ಲಿ ಬೇರೊಂದು ರೀತಿಯಲ್ಲಿ ಪತಿ–ಪತ್ನಿಯರಾಗಿ ಬಾಳುವ ಕಾಲವನ್ನು ಕಾಯುತ್ತಿತ್ತು.

# ಕುಮುದಿನಿ

ಈಗ ಸುಮಾರು ೩೫೦ ವರ್ಷಗಳ ಹಿಂದೆ, ನಾಲ್ಕು ಜನ ಮುಸಲ್ಮಾನ ಬಾದಶಹರು ಒಟ್ಟುಗೂಡಿ ವಿಜಯನಗರದ ರಾಯರ ರಾಜ್ಯವನ್ನು ಮಣ್ಣುಗೂಡಿಸಿದರಷ್ಟೆ. ಆ ಮುರಿದು ಹೋದ ರಾಜ್ಯವನ್ನು ತಿರುಗಿ ಸ್ಥಾಪಿಸುವದಕ್ಕಾಗಿ ರಾಯರ ಅಭಿಮಾನಿಗಳಾದ ಎಷ್ಟೋ ಜನ ಸರದಾರರು ವಂಶಪರಂಪರೆಯಾಗಿ ಮನಮುಟ್ಟಿ ಯತ್ನಿಸುತ್ತ ಬಂದರು. ಅವರ ಯತ್ನವು ತತ್ಕಾಲಕ್ಕೆ ಫಲದ್ರೂಪವಾಗದಿದ್ದರೂ ಅದು ಕ್ರಮವಾಗಿ ಮುಸಲ್ಮಾನರ ರಾಜ್ಯದಾಡಳಿತದ ಕೀಲಗಳನ್ನು ಸಡಲಿಸುತ್ತ ಹೋಯಿತು.

ಇಂಥ ದೀರ್ಘ ಪ್ರಯತ್ನದ ಮಾಲಿಕೆಯಲ್ಲಿ ನಮ್ಮ ಎಚ್ಚಮನಾಯಕನ ತಂದೆಯು ಅಗ್ರೇಸರನಾಗಿದ್ದನು. ಆತನು ಸಾಯುವಾಗ ತನ್ನ ವ್ರತವನ್ನು ಮುಂದಕ್ಕೆ ಸಾಗಿಸುವಂತೆ ತನ್ನ ಮಗನಿಂದ ವಚನವನ್ನು ತಕ್ಕೊಂಡಿದ್ದನು. ಇದಕ್ಕಾಗಿ ಎಚ್ಚಮನಾಯಕನು ವಿಜಯನಗರವನ್ನು ಕಣ್ಣುಮುಟ್ಟ ನೋಡಿ, ವಿರೂಪಾಕ್ಷನ ದರ್ಶನವನ್ನು ತಕ್ಕೊಂಡು ವ್ರತವನು ಕೈಕೊಳ್ಳಬೇಕೆಂದು, ನಿಯಮಿತ ಪರಿವಾರದೊಡನೆ, ತನ್ನ ಪ್ರತಾಪದುರ್ಗ ರಾಜಧಾನಿಯಿಂದ ಹೊರಟು ಪಂಪಾಕ್ಷೇತ್ರಕ್ಕೆ ಬಂದಿದ್ದನು. ಗಳಗನಾಥರ ಐತಿಹಾಸಿಕ ಕೃತಿಯ ಕಥೆ ಇಲ್ಲಿಂದ ಆರಂಭವಾಗುತ್ತದೆ.

ಎಚ್ಚಮನಾಯಕನು ಇಪ್ಪತ್ತೈದು ವರ್ಷದ ಪ್ರಾಯಸ್ಥನಾಗಿದ್ದನು. ಆತನ ನಿಲುವಿಕೆ ಎತ್ತರ, ಮೈಕಟ್ಟು ತಿಳುವಾದದ್ದು, ನೇತ್ರಗಳು ತೇಜಃಪುಂಜ, ಮುಖಮುದ್ರೆ ಪ್ರತಾಪಯುಕ್ತವಾದದ್ದು. ಆತನು ಬಹು ಬೆಲೆಯುಳ್ಳ ಕೆಂಪು ಮಖಮಲಿಯ ಜರದ ಚಣ್ಣವನ್ನು ತೊಟ್ಟಿದ್ದನು. ಕಾಲಲ್ಲಿ ಸುಂದರವಾದ ಮಂಚ್ಚೆಗಳನ್ನು ಮೆಟ್ಟಿದ್ದನು ಟೊಂಕಕ್ಕೆ ಸುತ್ತಿದ ಹಳದಿಯ ಬಣ್ಣದ ಜರದ ಶಾಲಿನ ಕೆಳಗಡೆಯಲ್ಲಿ, ಆತನ ವಜ್ರದ ಹಿಡಿಕೆಯ ಖಡ್ಗವು ಸುಂದರವಾದ ಒರೆಯಲ್ಲಿ ಅಡಗಿಕೊಂಡು ಒಪ್ಪುತ್ತಿತ್ತು. ಉದಾತ್ತಭಾವದ ಆ ಪ್ರತಾಪಿಯು ಯಾವಾಗಲೂ ನಗೆಮೊಗದಿಂದ ಒಪ್ಪುತ್ತಿದ್ದನು.

ಆದರೆ ಉಲ್ಲಾಸವೃತ್ತಿಯು ಆ ವೀರನ ಮುಖವು ಆ ದಿನ ಕಳೆಗುಂದಿದ್ದಿತು. ಮನಸ್ಸೊಂದು ಸ್ವಸ್ಥವಿಲ್ಲದ್ದರಿಂದ, ಖಿನ್ನವದನನಾಗಿದ್ದ ಆ ತರುಣ ನಾಯಕನು ಎಡಬಲಗಳನ್ನು ನೋಡದೆ, ಜನರ ಮುಜರೆಗಳನ್ನು ಕೂಡ ಸರಿಯಾಗಿ ತೆಗೆದುಕೊಳ್ಳದೆ, ಉಸುರ್ಗರೆಯುತ್ತ ಕುದುರೆಯನ್ನು ಇಳಿದು, ಕಡಿವಾಣವನ್ನು ಸೇವಕನ ಕೈಯಲ್ಲಿ ಕೊಟ್ಟು, ವಿರೂಪಾಕ್ಷ ಮಂದಿರದ ಕಡೆಗೆ ಸಾಗಿದನು.

ವಿಜಯನಗರವು ಹಾಳಾಗಿ ಅಂದಿಗೆ ಸುಮಾರು ೫೦ ವರ್ಷಗಳಾಗಿದ್ದುವು. ಅಲ್ಲಿನ ಅರಮನೆಗಳು, ಸಭಾಸ್ಥಾನಗಳು, ಗಜಶಾಲೆಗಳು, ಹಯಶಾಲೆಗಳು, ರಾಜಪುರುಷರ ಹಾಗೂ ಧನಿಕರ ಅಂತಸ್ತಿನ ಮನೆಗಳು, ಭವ್ಯವಾದ ದೇವಾಲಯಗಳು ನಾಶದ ಪಥವನ್ನು ಹಿಡಿದು, 'ಹಾಯ್! ಕಠಿಣ ಕಾಲವೇ, ನಮ್ಮನ್ನು ಗೂಗೆಗಳ ವಾಸಸ್ಥಳಗಳಾಗಿ ಮಾಡಿಬಿಟ್ಟೆಯಲ್ಲ!' ಎಂದು ಕುದಿಯುತ್ತ ವಿದ್ರೂಪವಾಗಿ ತೋರುವದನ್ನು ನೋಡಿ ನಮ್ಮ ತರುಣ ನಾಯಕನ ಎದೆಯೊಡೆದು ನೀರಾಯಿತು. ವಿದ್ಯಾರಣ್ಯರಂಥ ಅಲೌಕಿಕ ಪುರುಷರೂ ಕೃಷ್ಣರಾಜನಂಥ ನರವೀರರೂ ರಾಮರಾಜನಂಥ ಕಾರ್ಯದಕ್ಷರೂ ಮುಸಲ್ಮಾನರ ಅಬ್ಬರವನ್ನು ಅಡಗಿಸಿ, ಪೋರ್ತುಗೀಜರನ್ನು ದಂಗುಬಡಿಸಿ, ಕನ್ನಡ ನುಡಿಗೆ ರಾಜಭಾಷೆಯೆಂಬ ಗೌರವದ ಪದವಿಯನ್ನಿತ್ತು, ಮೂನ್ನೂರು ವರ್ಷ ರಾಜ್ಯಭಾರ ಮಾಡಿದ ಆ ಪಟ್ಟಣದ ಭವ್ಯವಾದ ರಾಜಬೀದಿಗಳು ನಿರ್ಮಾನುಷವಾಗಿರುವದನ್ನು ನೋಡಿ, ಮೊದಲೇ ಕರಗಿದ್ದ ಎಚ್ಚಮನಾಯಕನ ಹೃದಯವು ಕಂಪನವನ್ನು ಹೊಂದಿತು.

ಇದಲ್ಲದೆ ಅಲ್ಲಲ್ಲಿ ಮೆಲ್ಲನೆ ತಲೆಯಾಡಿಸುತ್ತ ಔದಾಸೀನ್ಯದಿಂದ ನಿಂತುಕೊಂಡಿದ್ದ ದೊಡ್ಡ ದೊಡ್ಡ ವೃಕ್ಷಗಳೂ ಹಾಳಾಗಿದ್ದ ಉದ್ಯಾನಗಳೂ ಮುರಿದು ಹೋಗಿದ್ದ ಕಾರಂಜಿಗಳೂ ಹೂತು ಹೋಗಿದ್ದ ಮನೋಹರವಾದ ಜಲಾಶಯಗಳೂ ಗೋಡೆಗಳು ಬಿದ್ದದ್ದರಿಂದ ಅಮಂಗಲವಾಗಿ ತೋರುವ ಮಂದಿರಗಳ ಅಂತರ್ರಚನೆಯೂ ಅರ್ಚಕರಿಲ್ಲದ್ದರಿಂದ ಕಾಲುಗೆರೆ ಹಿಡಿದಂತೆ ಬಿದ್ದಲ್ಲಿ ಬಿದ್ದುಕೊಂಡಿದ್ದ ದೇವರ ಪ್ರತಿಮೆಗಳೂ ಒಟ್ಟುಗೂಡಿ ದುಃಖದಾಯಕವಾಗಿ ನಾಯಕನ ಮೈಯಲ್ಲಿ ನಡುಗನ್ನು ಹುಟ್ಟಿಸಲು, ಆತನ ಆ

ಕಂಪಿತ ಹೃದಯುಜಲವು ಉಕ್ಕೇರಿ ಅವನ ಕಂತ್ತಿಗೆಯ ಶಿರಗಳನ್ನು ಉಬ್ಬಿಸಿತು. ಆದರೆ ತನ್ನ ಸತ್ವಾತಿಶಯದಿಂದ ದುಃಖಾಶ್ರುಗಳನ್ನು ನಿಗ್ರಹಿಸಿದನು.

ನಾಯಕನು ವಿರೂಪಾಕ್ಷನ ದರ್ಶನವನ್ನೂ ಫಲಮಂತ್ರಾಕ್ಷತೆಗಳನ್ನೂ ಪಡೆದು ತನ್ನ ಪರಿವಾರವಿರುವ ಬಿಡಾರಕ್ಕೆ ಹಿಂತಿರುಗಿದಾಗ ರಾತ್ರಿಯಾಗಿತ್ತು. ಬಂದು ನೋಡುತ್ತಾನೆ, ಹಲವು ಜನರ ಚಂಡುಂಗಳು ಕತ್ತರಿಸಿ ಹೋಗಿದ್ದುವು. ಇನ್ನು ಹಲವು ಜನರು ಗಾಯುಗಳ ವ್ಯಥೆಯನ್ನು ತಾಳಲಾರದೆ ಕೆಟ್ಟ ದನಿಯಿಂದ ಕೂಗುತ್ತಿದ್ದರು. ನೆಲವೆಲ್ಲ ರಕ್ತಮಯವಾಗಿತ್ತು. ತನ್ನ ಸೈನಿಕರ ಜೊತೆಗೆ ಕೆಲವು ಮುಸಲ್ಮಾನರ ಹೆಣಗಳೂ ಬಿದ್ದಿದ್ದುವು.

ಅವನಿಗೆ ಏನೂ ತೋಚದೆ, ದಿಙ್ಮೂಢನಾಗಿದ್ದಾಗ, ಕುದುರೆಯ ಕೋಳಗಗಳ ದನಿ ಕೇಳ ಬಂದಿತು. ತುಸು ಹೊತ್ತಿನಲ್ಲಿ, ಬೆಟ್ಟದಂಥ ಕುದುರೆಯನ್ನೇರಿ ಒಬ್ಬ ಮುಸಲ್ಮಾನ ವೀರನು ನಾಯಕನ ಸಮೀಪಕ್ಕೆ ಬಂದನು. ಆತನನ್ನು ನೋಡಿ ನಾಯಕನ ಸರ್ವಾಂಗವು ತಪ್ತವಾಗಲು, ಆ ಯುವನ ವೀರನು ಅಟ್ಟಹಾಸದಿಂದ ನಗುತ್ತ "ಎಚ್ಚಮನಾಯಕಾ, ನನ್ನ ತರ್ಕವು ಸುಳ್ಳಾಗಲಿಲ್ಲ. ನೀನು ಜೀವದಿಂದಿರುವದರಿಂದ ನಾವು ಈಗೆರಡು ತಾಸುಗಳ ಹಿಂದೆ ಮಾಡಿದ ವಧೆಯು ವ್ಯರ್ಥವಾದಂತಾಯಿತು. ಆದರೂ ಚಿಂತೆಯಿಲ್ಲ. ಇಗೋ, ನನ್ನ ಈ ಖಡ್ಗಕ್ಕೆ ನಿನ್ನ ಪ್ರಾಣವು ಆಹುತಿಯಾಗಲಿ. ಅದರಿಂದ ನಮ್ಮ ವಿಜಾಪುರದ ಬಾದಶಹನು ಪ್ರಸನ್ನನಾಗಬಹುದು" ಎಂದು ನುಡಿನುಡಿಯುತ್ತಲೇ ನಾಯಕನ ಮೇಲೆ ಖಡ್ಗವನ್ನು ಪ್ರಯೋಗಿಸಿದನು. ಆದರೆ ಚಪಲನಾದ ನಾಯಕನು ತನ್ನ ಢಾಲನ್ನೊಡ್ಡಿದನು. ಮುಸಲ್ಮಾನ ಸರದಾರನು ಕಸುವಿನಿಂದ ಮತ್ತೊಮ್ಮೆ ಖಡ್ಗವನ್ನು ಪ್ರಯೋಗಿಸಲು, ನಾಯಕನು ಗುರಿ ನೋಡಿ, ತನ್ನ ಖಡ್ಗದಿಂದ ಅದಕ್ಕೆ ಮರ್ಮಾಂತಿಕ ಏಟನ್ನು ಹಾಕಿದನು. ಕೂಡಲೇ ಮುಸಲ್ಮಾನ ಸರದಾರನ ಖಡ್ಗವು ಕೈಯಿಂದ ಕೊಸರಿ ಝಣಗುಟ್ಟುತ್ತ ಬಹುದೂರ ಬಿದ್ದಿತು.

ನಿಶ್ಶಸ್ತ್ರನಾದ ಸರದಾರನು ತಲೆ ತಗ್ಗಿಸಿಕೊಂಡು ಕುಳಿತಾಗ ಉದಾರ ಮನಸ್ಸಿನ ಎಚ್ಚಮನಾಯಕನು ಅವನನ್ನು ತುಂಡರಿಸುವ ಗೋಜಿಗೆ ಹೋಗಲಿಲ್ಲ. ನಾಯಕನ ಈ ದೊಡ್ಡಿಸ್ತನಕ್ಕೆ ಮಾರುಹೋದ ಆ ವೀರನು ವಿನಯ

ದಿಂದ, "ಎಲೈ ಕನ್ನಡ ವೀರನೇ, ನಿನ್ನ ಚಾಪಲ್ಯಕ್ಕೆ ಮೆಚ್ಚಿದ ನಾನು ನಿನ್ನ ಶರೀರಸಾಮರ್ಥ್ಯವನ್ನು ನೋಡಲಿಚ್ಛಿಸುತ್ತೇನೆ. ಇಷ್ಟವಿದ್ದರೆ ಬಾ. ಮಲ್ಲ ಯುದ್ಧವನ್ನು ಮಾಡೋಣ" ಎಂದನು.

ಕೂಡಲೇ ಇಬ್ಬರೂ ಕೈಗೆ ಕೈ ಕೊಟ್ಟು ಕಾದತೊಡಗಿದರು. ಮುಸಲ್ಮಾನ ವೀರನು ದೇಹದಾರ್ಢ್ಯದಿಂದ ನಾಯಕನಿಗಿಂತ ಮೀರಿದ್ದನು. ವಯಸ್ಸಿನಿಂದಲೂ ಹಿರಿಯನಾಗಿದ್ದನು. ಇಬ್ಬರೂ ಬಲುಹೊತ್ತು ಈರ್ಷೆಯಿಂದ ಕಾದಿದರು. ತನ್ನ ಎದುರಾಳಿಯನ್ನು ಸೋಲಿಸುವುದು ಕಠಿಣವೆಂದು ತಿಳಿದಿದ್ದ ನಾಯಕನು. ಯಾವದೋ ಒಡಿತದಿಂದ, ಮುಸಲ್ಮಾನ ವೀರನನ್ನು ಅಂಗಾತ ಕೆಡವಿ ತಾನು ಎದೆಯ ಮೇಲೆ ಕುಳಿತು, ಕೂಡಲೇ ಎದ್ದು, ಸಲಾಮು ಮಾಡಿ ಸರಿದು ನಿಂತನು.

ನಾಯಕನ ಈ ಸತ್ವಾತಿಶಯಕ್ಕೆ ಬೆಕ್ಕಸ ಬೆರಗಾದ ಮುಸಲ್ಮಾನ ವೀರನು, "ವೀರಮಿತ್ರನೇ, ಧನ್ಯನು, ಧನ್ಯನು ! ನಿಮ್ಮಂಥ ಕನ್ನಡ ವೀರರು ಇರುವದರಿಂದಲೇ, ವಿಜಯನಗರದ ರಾಜ್ಯದ ಬೇರುಗಳನ್ನು ಕಿತ್ತು ಒಗೆಯಲಿಕ್ಕೆ ನಮ್ಮ ಬಾದಶಹರು ಇಷ್ಟು ವರ್ಷ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ನಿನ್ನಿಂದ ಎರಡು ಸಾರೆ ಗೆಲ್ಲಲ್ಪಟ್ಟ ಈ ದೇಹವು ನಿನ್ನದಾದ್ದರಿಂದ ನಿನ್ನ ಆಪತ್ಕಾಲದಲ್ಲಿ ನೆರವಾಗುವದು ನನ್ನ ಪವಿತ್ರ ಕರ್ತವ್ಯವಾಗಿರುವದು. ನನ್ನ ಹೆಸರು ಚಾಂದಖಾನನು. ಈಗ ನನಗೆ ಅಪ್ಪಣೆಕೊಡು" ಎಂದು ಹೇಳಿ, ತನ್ನ ಕುದುರೆಯನ್ನು ಹತ್ತಿ ನಡೆದುಬಿಟ್ಟನು.

ಪರಿವಾರವನ್ನು ಕಳೆದುಕೊಂಡಿದ್ದ ನಾಯಕನ ಮನಸ್ಸು ಈ ವಿಜಯದಿಂದ ಸಮಾಧಾನಹೊಂದಿರಲಿಲ್ಲ. ಅವನು ಪಂಪಾ ಸರೋವರಕ್ಕೆ ಹೋಗಿ ಮುಖವನ್ನು ತೊಳೆದುಕೊಂಡು ಹಿಂತಿರುಗುತ್ತಿರುವಾಗ ಚಂದ್ರಗಿರಿಯಿಂದ ದೂತರು ಬಂದು, ರಾಜಮುದ್ರೆಯುಳ್ಳ ಚೀಲವೊಂದನ್ನು ಇತ್ತರು. ಕೂಡಲೇ ನಾಯಕನು ಚೀಲವನ್ನು ತಲೆಯ ಮೇಲಿಟ್ಟುಕೊಂಡು, ವಂದಿಸಿ ಮುದ್ರೆಯನ್ನೊಡೆದು ಒಳಗಿನ ಪತ್ರವನ್ನು ತಕ್ಕೊಂಡು ಓದಿದ ಮೇಲೆ, ತನ್ನ ಸಮೀಪದಲ್ಲಿ ನಿಂತಿರುವ ಸೇವಕನನ್ನು ಕುರಿತು, "ತಿರುವೆಂಕಟಾ, ನಾವು ಈಗಲೇ ಚಂದ್ರಗಿರಿಗೆ ಹೊರಡತಕ್ಕದ್ದು" ಎಂದು ಹೇಳಿ ಕುದುರೆಯನ್ನು ಮುನ್ನೂಕಿದನು.

ಇತ್ತ ಚಂದ್ರಗಿರಿಯ ಅರಮನೆಯಲ್ಲಿ ದರ್ಬಾರದ ವ್ಯವಸ್ಥೆಯು ಒತ್ತರದಿಂದ ಸಾಗಿದ್ದಿತು. ಆದರೆ ಮಂಗಲವಾದ್ಯಗಳ ಆಡಂಬರವಿಲ್ಲದೆ, ಕೇವಲ ಔದಾಸೀನ್ಯದಿಂದ ದರ್ಬಾರವು ಜರುಗಲಿಕ್ಕೆ, ಮಹಾರಾಜರಾದ ಮೊದಲನೇ ವೆಂಕಟದೊರೆಗಳ ಅಸಾಧ್ಯ ಬೇನೆಯೇ ಕಾರಣವೆಂಬುದನ್ನು ತಿಳಿದ ಜನರೂ ಔದಾಸೀನ್ಯವನ್ನು ತಾಳಿ, ತಮ್ಮೊಳಗೆ ಗುಜುಗುಟ್ಟುತ್ತಿದ್ದರು.

ಇಂಥ ಸ್ಥಿತಿಯಲ್ಲಿ, ಬೇನೆಯಿಂದ ಜರ್ಜರನಾದ ವೆಂಕಟದೊರೆಯು, ಬಹು ಕಷ್ಟದಿಂದ ದರ್ಬಾರಕ್ಕೆ ಬಂದನು. ಅರಸನಿಗೆ ಕುಳಿತುಕೊಳ್ಳುವ ತ್ರಾಣವಿಲ್ಲದ್ದರಿಂದ, ಹಾಸಿಗೆಯ ಮೇಲೆ ಮಲಗಿಕೊಂಡನು. ಆತನ ಈ ಶೋಚನೀಯ ಸ್ಥಿತಿಯನ್ನು ನೋಡಿ ದರ್ಬಾರದೊಳಗಿನ ಸ್ವಾಮಿನಿಷ್ಠ ಜನರ ಕಣ್ಣುಗಳೊಳಗಿಂದ ನೀರು ಸುರಿಯಹತ್ತಿದವು.

ವೆಂಕಟದೊರೆಯ ವಂಶವು ಸಾಮಾನ್ಯವಾದದ್ದಲ್ಲ. ತಾಳೀಕೋಟೆಯ ಕಾಳಗದಲ್ಲಿ ಮಡಿದ ರಣವೀರ ರಾಮರಾಜನಿಂದ ಇವನು ನಾಲ್ಕನೆಯ ತಲೆಯವನಾಗಿದ್ದನು. ವಿಜಯನಗರದಂಥ ಅಪೂರ್ವ ಪಟ್ಟಣವು ಹಾಳಾದ ಬಳಿಕ ರಾಯರ ವಂಶದವರು ಚಂದ್ರಗಿರಿಯಂಥ ಸಮುದ್ರತೀರದ ಸಣ್ಣ ಪಟ್ಟಣದಲ್ಲಿ ಆಳಹತ್ತಿದರೂ ಅವರ ಬಲ ವೈಭವಗಳು ನಷ್ಟವಾಗಿದ್ದಿಲ್ಲ.

೧ ನೇ ವೆಂಕಟರಾಜನು ೨೮ ವರ್ಷ ರಾಜ್ಯವಾಳಿ ವೃದ್ಧನಾದ ಮೇಲೆ ಬೇನೆಯು ಅಂಟಿಕೊಳ್ಳಲು, ತನ್ನ ಅಂತ್ಯಕಾಲವು ಸನ್ನಿಹಿತವಾದುದನ್ನು ಕಂಡು, ತನ್ನ ಕೊನೆಯ ಈ ದರ್ಬಾರದಲ್ಲಿ ಮಾಂಡಲಿಕರನ್ನು ಕರೆಯಿಸಿಕೊಂಡಿದ್ದನು. ಅವರು ಅವನ ಎಡಬಲಗಳಲ್ಲಿ ಕುಳಿತಿದ್ದರು. ಹೊಟ್ಟೆಯ ಮಗನೆಂದು ಕರೆಯಿಸಿಕೊಳ್ಳುವ ಯುವರಾಜನೂ ಅರಸನ ಮಾವನಾದ ಜಗರಾಯನೂ ತಂಗಿಯ ಗಂಡನಾದ ಓಬಲರಾಯನೂ ಅರಸನ ಬಳಿಯಲ್ಲಿಯೇ ಕುಳಿತಿದ್ದರು. ರಾಣಿಯರು ಪರದೆಯ ಹಿಂದೆ ಕುಳಿತು, ಕಣ್ಣೀರು ಸುರಿಸುತ್ತ, ಅರಸನೆಡೆಗೆ ದೈನ್ಯದಿಂದ ನೋಡುತ್ತಲಿದ್ದರು.

ಆಗ ವೆಂಕಟದೊರೆಯು, "ಪ್ರಿಯ ಮಿತ್ರರೇ, ವಿಜಯನಗರದ ರಾಯರ ಸಿಂಹಾಸನದ ವಿಷಯವಾಗಿ ಇರುವ ನಿಮ್ಮ ನಿಷ್ಠೆಯನ್ನು ನೋಡಿ, ನನಗೆ ಪರಮಾನಂದವಾಗುತ್ತದೆ. ಇನ್ನು ಮುಂದೆಯೂ ನಮ್ಮ ಸದ್ವಂಶವನ್ನು

ಕಾಯುವ ಭಾರವು ನಿಮ್ಮನ್ನೇ ಕೂಡಿರುತ್ತದೆ. ಇಂದೊ ನಾಳೆಯೊ ಪ್ರಾಣ ವನ್ನು ಬಿಡಲಿಕ್ಕೆ ಸಿದ್ಧನಾದ ನಾನು ಇಂದಿನಿಂದ ಸಿಂಹಾಸನದ ಹಕ್ಕನ್ನು ಬಿಡುವವನಿದ್ದೇನೆ. ಅದಕ್ಕಾಗಿ ನಮ್ಮ ಅಣ್ಣನ ಮಗನಾದ ಚಿಕ್ಕರಾಯನನ್ನು ಬೇಗನೇ ಕರಿಸಿರಿ. ಆತನೇ ನನ್ನ ತರುವಾಯ ಈ ಪಟ್ಟಕ್ಕೆ ಬಾಧ್ಯಸ್ಥನು. ರೋಗಪೀಡಿತನಾದ ಈ ವೃದ್ಧರಾಜನ ಮಾತಿನ ವಿಷಯವಾಗಿ ಇಲ್ಲದ ಕಲ್ಪನೆಗಳನ್ನು ಮಾಡದೆ, ಚಿಕ್ಕರಾಯನನ್ನು ಬೇಗನೇ ಕರಿಸತಕ್ಕದ್ದು !"

ಪ್ರತ್ಯಕ್ಷ ಮಗನು ಹಾಸಿಗೆಯ ಬಳಿಯಲ್ಲಿ ಕುಳಿತಿದ್ದು ಪಟ್ಟಕ್ಕೆ ಯೋಗ್ಯ ಹಕ್ಕುದಾರನು ಇಲ್ಲೆಂದು ದೊರೆಯು ಅಂದದ್ದನ್ನು ಕೇಳಿ, ಸರದಾರರಲ್ಲಿ ತರ್ಕವಿತರ್ಕಗಳು ಪ್ರಾರಂಭವಾದುವು ! ಮಂತ್ರಿಯ ಆಜ್ಞೆಯಂತೆ ಚಿಕ್ಕರಾಯ ನನ್ನು ಕರೆಯಲು ಒಬ್ಬಿಬ್ಬ ಪ್ರತಿಷ್ಠಿತರು ಹೋದರು.

ಇತ್ತ ಬಳಿಯಲ್ಲಿ ಕುಳಿತಿದ್ದ ಯುವರಾಜನ ಹಾಗೂ ಅವನ ತಾಯಿಯ ಆಪ್ತೇಷ್ಟರು ಚಿಂತೆಗೊಳಗಾದರು. ಮೇಲೆ ಹೇಳಿದ ಜಗರಾಯನ ಮಗಳಾದ ಬಾಯಮ್ಮಳೆಂಬ ಹೆಸರಿನ ಸುಂದರಿಯು, ವೃದ್ಧದೊರೆಯ ಚಿಕ್ಕ ರಾಣಿ ಯಾಗಿದ್ದಳು. ಬಹು ಕಾಲದ ವರೆಗೆ ಮಕ್ಕಳಾಗದ್ದರಿಂದ, ವೆಂಕಟದೊರೆಯು ಅವಳನ್ನು ಮದುವೆಯಾಗಿದ್ದನು. ತನಗೂ ಮಕ್ಕಳಾಗದಿದ್ದಾಗ ಬಾಯಮ್ಮ ನಿಗೆ ಹುಚ್ಚು ಹಿಡಿದಂತಾಗಿದ್ದಿತು. ತಾನು ಪುತ್ರವತಿಯಾಗಿ ಎಲ್ಲ ರಾಣಿಯ ರಲ್ಲಿ ಆಧ್ಯತೆಯನ್ನು ಮೆರೆಸಬೇಕೆಂದು ಆಕೆಯು ಬಯಸುತ್ತಿದ್ದಳು. ಆಗ ಆಕೆಯ ತವರು ಮನೆಯ ಒಬ್ಬ ಬ್ರಾಹ್ಮಣ ಪರಿಚಾರಿಕೆಯು, "ದೊರೆ ಸಾನಿಯೆ, ನಮ್ಮಂಥ ಬಡವರಿಗೆ ದೇವರು ಬೇಡವೆಂದರೂ ಮಕ್ಕಳನ್ನು ಕೊಡುವನು. ದೊರೆಯ ಅಕ್ಕರೆಯ ರಾಣಿಯಾದ ನೀನು ಮಕ್ಕಳಿಗಾಗಿ ಹಲವಾರು ದೇವರಿಗೆ ಹರಕೆ ಹೊತ್ತರೂ ಒಂದು ದೇವರಿಗೂ ದಯೆಯು ಬರವೊಲ್ಲದು. ನಾನು ನಿನಗೊಂದು ಹಂಚಿಕೆಯನ್ನು ಹೇಳಿಕೊಡುತ್ತೇನೆ. ಅದೇನೆಂದರೆ, ನಾನು ಈಗ ಒಂದು ತಿಂಗಳ ಬಸಿರಿದ್ದೇನೆ; ನೀನು ಒಂದು ತಿಂಗಳ ಬಸುರಿಯೆಂದು ಸುದ್ದಿ ಹುಟ್ಟಿಸು. ದಿನ ತುಂಬಿ ನಾನು ಹಡೆದ ಕೂಡಲೇ ನನ್ನ ಕೂಸನ್ನು ನಿನ್ನ ಬಳಿಗೆ ಕಳುಹಿಸುತ್ತೇನೆ. ಅಲ್ಲಿಂದ ನೀನು ರಾಜಮಾತೆಯಾಗಿ, ನಿನ್ನ ಮಗನೇ ಮುಂದೆ ಅರಸನಾಗುವವನಾದ್ದರಿಂದ, ನನ್ನ ಕೂಸಿನ ಕಲ್ಯಾಣವೂ ಆದಂತಾಗುವದು !" ಎಂದು ಹೇಳಿದಳು.

ಹೀಗೆ ಒಬ್ಬ ಪರಿಚಾರಿಕೆಯ ಪುತ್ರನು ರಾಜಪುತ್ರನಾದನು. ವೆಂಕಟದೊರೆಗೆ ಇದು ಗೊತ್ತಿದ್ದರೂ, ಒಮ್ಮೆ ದುರ್ಬಲ ಮನೋಭಾವದ ಗಳಿಗೆಯಲ್ಲಿ ಸುಮ್ಮನಿದ್ದ ಮೇಲೆ ಈ ಹುಚ್ಚಾಟದ ಮುಂದಿನ ಪ್ರತಿಯೊಂದು ಕಾರ್ಯಕ್ಕೂ ಅವನು ಸುಮ್ಮನಿರಲೇಬೇಕಾಯಿತು. ಆದರೆ ತನ್ನ ಸದ್ವಂಶದ ವಿಷಯವಾಗಿ ಸಂಪೂರ್ಣ ಅಭಿಮಾನವುಳ್ಳ ವೆಂಕಟದೊರೆಯು, ಆ ಅನ್ಯ ಕುಮಾರನನ್ನು ಪಟ್ಟದ ಮೇಲೆ ಕುಳ್ಳಿರಿಸಲು ಅದು ಹೇಗೆ ಒಪ್ಪಿಯಾನು ?

ತುಸು ಹೊತ್ತಿನ ಮೇಲೆ ದೊರೆಯ ಅಣ್ಣನ ಮಗನಾದ ಚಿಕ್ಕರಾಯನೇನೊ ಬಂದನು. ಆದರೆ ರಾಜಮುದ್ರೆಯ ಉಂಗುರವನ್ನು ಇಸಿದುಕೊಳ್ಳಲು ಹಿಂದುಮುಂದು ನೋಡಹತ್ತಿದನು. ಇತ್ತ ವೆಂಕಟದೊರೆಯು ಆಗ್ರಹಪಡಿಸಹತ್ತಿದನು. ದರ್ಬಾರದ ಜನರು ಕೌತುಕಪಟ್ಟು ನೋಡುತ್ತಿರಲು, ಎಚ್ಚಮನಾಯಕನು ರಾಯನ ಕಣ್ಸನ್ನೆಯ ಆಜ್ಞೆಯ ಮೇರೆಗೆ ಎದ್ದು ನಿಂತು ಹೇಳತೊಡಗಿದನು. "ಚಿಕ್ಕರಾಯರೇ, ದೊರೆಗಳು ನಮ್ಮೆಲ್ಲರ ಸಮಕ್ಷ ತಮಗೆ ಅರಸುತನವನ್ನೊಪ್ಪಿಸಿ, ಸಮಾಧಾನದಿಂದ ದೇಹವನ್ನು ತ್ಯಜಿಸಬೇಕೆಂದು ಬಯಸುತ್ತಿರಲು, ತಾವು ಹೀಗೆ ಉದಾಸೀನರಾಗಿ ಒಲ್ಲೆನ್ನುವದೆ ? ರಾಜಾಜ್ಞೆಯನ್ನೂ ಪಿತ್ರಾಜ್ಞೆಯನ್ನೂ ಪಾಲಿಸುವದು ತಮ್ಮ ಕರ್ತವ್ಯವಾಗಿರುತ್ತದೆ. ಇಲ್ಲಿ ನೆರೆದಿರುವ ಈ ಸರದಾರ ಮಂಡಲವು ವಿಜಯನಗರದ ರಾಯರ ವಂಶದ ಹಿತಕ್ಕಾಗಿ ದೇಹವನ್ನು ಅರ್ಪಿಸುವದಕ್ಕೆ ಸಿದ್ಧವಾಗಿರಲು, ತಾವು ಹಿಂಜರಿಯುವದೇಕೆ ? ದಯಮಾಡಿಸಬೇಕು" ಎಂದು ನುಡಿಯುತ್ತ ಚಿಕ್ಕರಾಯನನ್ನು ರಾಜನ ಹಾಸಿಗೆಯ ಬಳಿ ಕರೆದೊಯ್ದು ರಾಜಮುದ್ರೆಯನ್ನು ಕೊಡಿಸಿದನು.

ಈ ದೃಶ್ಯದಿಂದ ಮಗನೆನಿಸಿಕೊಳ್ಳುವ ಬ್ರಾಹ್ಮಣ ಪುತ್ರನೂ ಅವನ ತಾಯಿಯೂ ಜಗರಾಯನೂ ಓಬಲರಾಯನೂ ಸಂತಾಪಗೊಂಡರು. ಕಲಹದ ಚಿಹ್ನಗಳು ಆಗಲೆ ಸ್ಪಷ್ಟವಾಗಿ ತೋರಹತ್ತಿದವು. ಎಚ್ಚಮನಾಯಕನಂಥ ಪ್ರತಾಪಿಯು ನೇತಾರನಿದ್ದುದರಿಂದ ಬಹುಜನ ಸರದಾರರೂ ಮಾಂಡಲಿಕರೂ ನೂತನ ದೊರೆಯ ಅಧಿಕಾರವನ್ನು ಒಪ್ಪಿಕೊಂಡರು. ಜಗರಾಯನೂ ಅವನ ಸಂಗಡ ಇದ್ದ ಒಬ್ಬಿಬ್ಬ ಸರದಾರರೂ ಸಭಾತ್ಯಾಗ ಮಾಡಿದರು. ಅವರನ್ನು ಕೂಡಲೇ ರಾಜದ್ರೋಹಿಗಳೆಂದು ಸಾರಲಾಯಿತು.

ದರ್ಬಾರವು ನೆರೆದ ಮೂರು ದಿನಗಳ ನಂತರ ವೃದ್ಧದೊರೆಯು ತೀರಿಕೊಂಡನು. ಎಚ್ಚಮನಾಯಕನು ಮುಂದೆ ಚಿಕ್ಕರಾಯನನ್ನು ಪಟ್ಟಕ್ಕೆ ಕುಳ್ಳಿರಿಸಿ, ರಾಜ್ಯದ ವ್ಯವಸ್ಥೆಯಲ್ಲಿ ತೊಡಗಿದನು. ಹೊಸ ಅರಸನ ಅಧಿಕಾರವು ಸ್ಥಿರಗೊಳ್ಳುವ ವರೆಗೆ ನಾಯಕನು ಸಸೈನ್ಯನಾಗಿ ಚಂದ್ರಗಿರಿಯಲ್ಲಿದ್ದನು. ಬರಬರುತ್ತ ರಾಜ ಪಕ್ಷವು ಬಲಿಷ್ಠವಾಗತೊಡಗಿತು. ಜಗರಾಯನ ಹಾಗೂ ಅವನ ಹಸ್ತಕರ ಸದ್ದು ವಿಶೇಷ ಕೇಳಬರಲಿಲ್ಲ. ತನ್ನೆಲ್ಲ ಕೆಲಸವು ಮುಗಿಯಿತೆಂದು ತಿಳಿದು ಎಚ್ಚಮನಾಯಕನು ರಾಜನ ಅನುಮತಿಯನ್ನು ಪಡೆದು, ಅರ್ಧ ಸೈನ್ಯವನ್ನು ಅಲ್ಲಿಯೇ ಬಿಟ್ಟು, ತನ್ನ ಊರಾದ ಪ್ರತಾಪಗಡಕ್ಕೆ ಹೊರಟನು.

ಮಾರ್ಗಸ್ಥನಾದ ಎಚ್ಚಮನಾಯಕನು ಒಂದು ಸರೋವರದ ತೀರದಲ್ಲಿ ಪಾಳೆಯವನ್ನು ಬಿಟ್ಟುಕೊಂಡು, ತನ್ನ ಡೇರೆಯಲ್ಲಿ ಒಬ್ಬನೇ ಕುಳಿತಿದ್ದಾಗ, ಓರ್ವ ವೃದ್ಧ ಬ್ರಾಹ್ಮಣನು ಒಬ್ಬ ಸ್ತ್ರೀಯನ್ನು ಕರೆದುಕೊಂಡು ನಾಯಕನ ದರ್ಶನಾಪೇಕ್ಷಿಯಾಗಿ ಬಂದನು.

ನಾಯಕನು ಅವರನ್ನು ಆದರದಿಂದ ಬರಮಾಡಿಕೊಂಡ ಮೇಲೆ, ಆ ಸ್ತ್ರೀಯು ಬ್ರಾಹ್ಮಣನ ಅಪ್ಪಣೆಯಂತೆ ಮೇಲಿನ ವಸ್ತ್ರವನ್ನು ತೆಗೆದ ಕೂಡಲೇ ಅವಳ ಸುಂದರ ಮೂರ್ತಿಯು ಡೇರೆಯನ್ನು ಬೆಳಗಿತು. ಚಿಕ್ಕಂದಿನಲ್ಲಿಯೇ ತನ್ನ ಮನಸ್ಸನ್ನಪಹರಿಸಿದ ನಾಯಕನು ಎದುರಿಗೆ ಕಂಡದ್ದರಿಂದ ಆಕೆಯ ಮುಖವು ಪ್ರಫುಲ್ಲಿತವಾಯಿತು. ನಾಯಕನು ಅವಳ ರೂಪಾತಿಶಯದಿಂದ ಸೆರೆಹಿಡಿಯಲ್ಪಟ್ಟನಾದರೂ ಅವಳ ಗುರುತು ಹತ್ತಲೊಲ್ಲದು. ಆದರೆ ಆ ಸುಂದರಿಗೆ ನಾಚಿಕೆಯು ಮುಗಿಬಿದ್ದು ಬಂದು ಅವಳು ಮುಖವನ್ನು ತಗ್ಗಿಸಿದಳು.

ಆಗ ಬ್ರಾಹ್ಮಣನು ಗಂಭೀರ ಸ್ವರದಿಂದ ನಾಯಕನನ್ನು ಕುರಿತು : "ಎಲೈ ತರುಣ ವೀರನೇ, ಈಕೆಯು ಕಾಂಚನಗಡದ ಅಧಿಪತಿಯಾದ ನರಸಿಂಗ ನಾಯಕನ ಮಗಳು, ಮೋಹಿನಿ. ನರಸಿಂಗನಾಯಕನು ವಿಜಾಪುರದ ಬಾದಶಹನ ದಂಡಿನೊಡನೆ ಹೋರಾಡುತ್ತಿರುವಾಗ ಯುದ್ಧದಲ್ಲಿ ಮರಣ ಹೊಂದಿದನು. ಸಂಗಡ ಹೋಗಿದ್ದ ಈಕೆಯೂ ಇವಳ ದಾಸಿಯೂ ಸೆರೆಸಿಕ್ಕರು.

ದಂಡಿನ ಮುಖ್ಯಸ್ಥನು ಪ್ರತ್ಯಕ್ಷ ಬಾದಶಹನ ಮಗನೇ ಇದ್ದು ಆತನು ಈಕೆಯ ರೂಪಾತಿಶಯಕ್ಕೆ ಮರುಳಾಗಿ ಈಕೆಯನ್ನು ಮದುವೆಯಾಗಬೇಕೆಂದನು. ನಿನ್ನನ್ನು ತುಂಬಾ ಪ್ರೀತಿಸುತ್ತಿದ್ದ ಈಕೆಗೆ ಈ ಹವಣಿಕೆಯು ಮರಣಪ್ರಾಯ ವೆನಿಸಿದ್ದರಲ್ಲಿ ಏನಾಶ್ಚರ್ಯವಿದೆ ? ಮೋಹಿನಿಯ ದಾಸಿಯು ಸ್ವಾಮಿಭಕ್ತಿ ಯಿಂದ ತನ್ನ ಪ್ರಾಣವನ್ನು ಕೊಟ್ಟು ಇವಳನ್ನು ಸೆರೆಯಿಂದ ಮುಕ್ತಳನ್ನಾಗಿ ಮಾಡಿದಳು. ತಪ್ಪಿಸಿಕೊಂಡು ಬಂದ ಈಕೆಯು ತೊಳಲುತ್ತ, ಬಳಲುತ್ತ ಪಂಪಾಕ್ಷೇತ್ರಕ್ಕೆ ಬಂದು ನಮ್ಮ ಮೊರೆಹೊಕ್ಕಳು. ಈಗೆರಡು ವರ್ಷಗಳ ಕಾಲ ನಾವು ಈಕೆಯ ರಕ್ಷಣ ಮಾಡಿದ್ದೇವೆ. ಇವಳ ತಂದೆತಾಯಿಗಳು ಇವಳನ್ನು ನಿನಗೇ ಕೊಡಬೇಕೆಂದು ಮಾಡಿದ್ದ ವಿಷಯವು ನಮಗೆ ತಿಳಿದು ಬಂದಿತು. ಈಕೆಯನ್ನು ನೀನು ಸ್ವೀಕರಿಸಬೇಕು" ಎಂದು ನುಡಿದನು.

ಯಾರಿಗಾಗಿ ನಾಯಕನು ಕೆಲವು ವರ್ಷಗಳ ಹಿಂದೆ ಹಂಬಲಿಸಿ ಈ ಲೋಕವನ್ನು ತ್ಯಜಿಸಿ ಹೋದಳೆಂದು ತಿಳಿದು ನಿರಾಶನಾಗಿದ್ದನೋ, ಅಂಥ ಮೋಹಿನಿಯು ಪ್ರತ್ಯಕ್ಷವಾಗಿ ತನಗೆ ಒದಗಿ ಬಂದದ್ದನ್ನು ತಿಳಿದು, ನಾಯಕನ ಸಂತೋಷಕ್ಕೆ ಪಾರವೇ ಉಳಿಯಲಿಲ್ಲ.

ಮುಂದುವರಿದು ಬ್ರಾಹ್ಮಣನು ಹೇಳಿದ್ದೇನೆಂದರೆ, "ನೀನು ಪಂಪಾ ಕ್ಷೇತ್ರಕ್ಕೆ ಬಂದದ್ದು ನಮಗೆ ಆಮೇಲೆ ತಿಳಿಯಿತು. ಇಲ್ಲದಿದ್ದರೆ ಆಗೇ ಒಪ್ಪಿಸಿ ನಿಶ್ಚಿಂತನಾಗುತ್ತಿದ್ದೆ. ವಿಜಾಪುರದ ಬಾದಶಹನ ಮಗನ ಕಣ್ಣು ಮೋಹಿನಿಯ ಮೇಲೆ ವಿಶೇಷವಾಗಿದ್ದುದರಿಂದ ಅವಳನ್ನು ಹುಡುಕಿಸಲು ಆತನು ಗೂಢಚಾರರನ್ನು ಬಿಟ್ಟಿದ್ದನು. ಇವಳ ಸಂರಕ್ಷಣಕ್ಕಾಗಿ ನಾವು ಬಹಳ ಎಚ್ಚರ ಪಡಬೇಕಾಯಿತು. ಆದರೂ ನಮ್ಮ ದುರ್ದೈವಕ್ಕೆ, ಒಬ್ಬ ಕ್ಷೇತ್ರಸ್ಥನು ಮುಸಲ್ಮಾನರ ಲಂಚಕ್ಕೆ ಮರುಳಾಗಿ ನಮ್ಮ ಗುಪ್ತಸ್ಥಾನವನ್ನು ತೋರಿಸಿ ಬಿಟ್ಟನು. ಹೀಗಾಗಿ ಮೋಹಿನಿಯು ಮುಸಲ್ಮಾನರ ವಶಕ್ಕೆ ಬಿದ್ದಳು. ನಾನೂ ಆಕೆಯನ್ನು ಹಟದಿಂದ ಹಿಂಬಾಲಿಸಿದೆನು ಅಕಸ್ಮಾತ್ ನಿನ್ನ ಹೆಸರನ್ನು ತೆಕ್ಕೊಂಡು ನಾನು ಮೋಹಿನಿಯ ಸಂಗಡ ಮಾತನಾಡುವದು ಸಂಗಡ ಇದ್ದ ಚಾಂದಖಾನ ಎಂಬವನ ಕಿವಿಗೆ ಬಿದ್ದಿತು. ಅವನೇನೊ ನಿನ್ನ ಮಿತ್ರನಂತೆ. ಆತನು ಯುಕ್ತಿಯಿಂದ ನಮ್ಮನ್ನು ಬಂಧಮುಕ್ತ ಮಾಡಿದನೆಂದೇ ನಾವು ನಿನ್ನ

ಬಳಿ ಸುರಕ್ಷಿತವಾಗಿ ಬಂದಿರುತ್ತೇವೆ. ಎಲ್ಲವೂ ಈಶಕೃಪೆ. ಇನ್ನು ನಾನು ಹೊರಡುವೆನು. ನಿನ್ನ ಪ್ರತಾಪಗಡಕ್ಕೆ ಹೋಗಿ, ಇಂದಿನಿಂದ ೧೦ ನೆಯ ದಿನ ನಿನ್ನ ಮನಸ್ಸು ಸ್ವಸ್ಥವಿದ್ದರೆ, ಇವಳನ್ನು ಮದುವೆಯಾಗು. ಸದ್ಯಕ್ಕೆ ರಾಜವಂಶವು ನಿನ್ನಿಂದ ರಕ್ಷಿಸಲ್ಪಟ್ಟರೂ ಪ್ರಕೃತದ ರಾಜನಿಗೆ ಕ್ಷೇಮವಾಗುವ ಲಕ್ಷಣಗಳಿಲ್ಲ. ನೀನಾದರೂ ಮೋಹಿನಿಯೊಡನೆ ಬಹಳ ಸಂಕಟಗಳನ್ನು ಅನುಭವಿಸಬೇಕಾಗುವದು. 'ವಿಪದಿ ಧೈರ್ಯಂ' ಎಂಬಂತೆ ಎಂಥ ಸಂಕಟದಲ್ಲಿ ಯಾದರೂ ಧೈರ್ಯವನ್ನು ಬಿಡಬೇಡ" ಎಂದು ಹೇಳಿ ಹೊರಡಲನುವಾದನು.

ಪಿತೃಸದೃಶನಾದ ಆ ಬ್ರಾಹ್ಮಣ ಋಷಿಯು ತನ್ನನ್ನು ಬಿಟ್ಟು ಹೊರಡು ವಾಗ ಮೋಹಿನಿಯು ಕಣ್ಣೀರು ಸುರಿಸುತ್ತ ಅವನನ್ನು ಹಿಂಬಾಲಿಸಿದಳು. ಆಗ ಆ ಬ್ರಾಹ್ಮಣನು ಅವಳನ್ನೂ ನಾಯಕನನ್ನೂ ತಡೆದು ನಿಲ್ಲಿಸಿದನು. ಅವರಿಬ್ಬರೂ ವಿನಯದಿಂದ ನಮಸ್ಕರಿಸಿದರು. ದುಃಖದಿಂದ ನೀರು ತುಂಬಿದ ಕಣ್ಣುಗಳಿಂದ ನೋಡುತ್ತ, ಮೋಹಿನಿಯು ತನ್ನ ಕೈಯಲ್ಲಿಯ ಕುಮುದ ಪುಷ್ಪವನ್ನು ಅವನ ಪಾದಗಳಿಗೆ ಅರ್ಪಿಸಿದಳು. ಆಗ ಅವನು, ಅವಳನ್ನು ಕೈಹಿಡಿದು ಮೇಲೆತ್ತಿ, "ಮಗಳೇ, ಕಣ್ಣೀರು ಸುರಿಸಬೇಡವಮ್ಮಾ. ನಿನ್ನ ನಿರ್ಮಲಾಂತಃಕರಣಕ್ಕೆ ನನ್ನ ಮನಸ್ಸು ಪ್ರಸನ್ನವಾಗಿದೆ. ನೀನು ಭಕ್ತಿ ಯಿಂದ ಕುಮುದ ಪುಷ್ಪವನ್ನು ಅರ್ಪಿಸಿದೆಯಾದ್ದರಿಂದ ನಾನು ಇಂದಿನಿಂದ ನಿನಗೆ ಕುಮುದಿನಿ ಎಂದು ಹೆಸರು ಇಡುತ್ತೇನೆ. ರೋಹಿಣಿಯು ಚಂದ್ರನನ್ನು ಅನುಸರಿಸುವಂತೆ, ಸರ್ವಕಾಲದಲ್ಲಿಯೂ ನೀನು ಪತಿಯನ್ನು ಅನುಸರಿಸಲಿಕ್ಕೆ ಸಮರ್ಥಳಾಗಿ ಬಾಳು" ಎಂದು ಹೇಳಿ ಮುಂದೆ ನಡೆದನು.

ಎಚ್ಚಮನಾಯಕನ ತಂದೆಯೂ ನರಸಿಂಗನಾಯಕನೂ ಪರಮ ಮಿತ್ರ ರಾಗಿದ್ದರು. ಅಂತಲೇ ತನ್ನ ಏಕಮಾತ್ರ ಪುತ್ರಿಗೆ ಎಚ್ಚಮನೇ ಯೋಗ್ಯ ವರನೆಂದು ನಂಬಿದ್ದ ನರಸಿಂಗನಾಯಕನು ಬಾಲ್ಯಾದಾರಭ್ಯ ಅವರಿಬ್ಬರಲ್ಲಿ ಪರಸ್ಪರ ಪರಿಚಯವನ್ನು ಬೆಳೆಯಿಸಿದ್ದನು. ಇಬ್ಬರೂ ಹೀಗೆ ಪರಸ್ಪರರಲ್ಲಿ ಅಕೃತ್ರಿಮ ಪ್ರೇಮವುಳ್ಳವರಾಗಿದ್ದರೂ ಈ ನಡುವೆ ನಾಲ್ಕು ವರ್ಷಗಳ ಅಂತರದಲ್ಲಿ ಮೊದಲ ಬಾರಿ ಏಕಾಂತದಲ್ಲಿ ಭೆಟ್ಟಿಯಾದ್ದರಿಂದ ಇಬ್ಬರಿಗೂ ಅತಿ ಸಂಕೋಚವೆನಿಸಿತು. ಜೊತೆಗೆ ಮುಂದಿನ ಕಷ್ಟಪರಂಪರೆಗಳ ಛಾಯೆಯೂ ಆ ಕ್ಷಣಕ್ಕೆ ಅವರ ಮನಸ್ಸನ್ನು ಕವಿಯಿತು.

ಬ್ರಾಹ್ಮಣಶ್ರೇಷ್ಠನ ಅಪ್ಪಣೆಯಂತೆ, ಮುಂದೆ ಅವರಿಬ್ಬರ ವಿವಾಹವು ಪ್ರತಾಪಗಡದಲ್ಲಿ ವಿಜೃಂಭಣೆಯಿಂದ ಜರುಗಿತು. ನಾಯಕನ ಚಿತ್ತವು ಮಾತ್ರ ಚಂದ್ರಗಿರಿಯಲ್ಲಿದ್ದಿತು. ಚಂದ್ರಗಿರಿಗೆ ಹೋಗುವ ಅವಸರವಿದ್ದುದರಿಂದ ವಿವಾಹ ಸಮಾರಂಭವು ಒಂದೇ ದಿನದಲ್ಲಿ ಮುಗಿಯಬೇಕಾಗಿದ್ದಿತು. ಬೆಳಗಿನಲ್ಲಿ ವಿವಾಹವಿಧಿಗಳೆಲ್ಲ ಮುಗಿದುವು. ಅಂತಃಪುರದೊಳಗಿನ ಜನರು. ನೂತನ ದಂಪತಿಗಳ ಶಯನಗೃಹ ಪ್ರವೇಶದ ಸಿದ್ಧತೆಯಲ್ಲಿ ತೊಡಗಿದ್ದರು. ಅಲ್ಲಿಯೇ ನವದಂಪತಿಗಳ ಉರುಟಣೆಯು ನಡೆದಿತ್ತು.

ಅಷ್ಟರಲ್ಲಿ ದ್ವಾರರಕ್ಷಕರು, ಚಂದ್ರಗಿರಿಯಿಂದ ಸವಾರರು ಧಾವಿಸಿ ಬಂದಿರುವರೆಂಬ ವಾರ್ತೆಯನ್ನು ಬಿನ್ನವಿಸಿದರು. ಅದನ್ನು ಕೇಳಿ ನಾಯಕನ ಎದೆಯೊಡೆದು ನೀರಾಯಿತು. ಲಗ್ನ ಸಮಾರಂಭಕ್ಕಾಗಿ ನಿನ್ನೆಯೇ ಚಂದ್ರಗಿರಿಯಿಂದ ಮುದ್ದುರಂಗನೆಂಬ ಸರದಾರನು ಬಹುಮಾನದ ಉಡುಗೊರೆಗಳನ್ನೂ ಚಿಕ್ಕ ಸೈನ್ಯವನ್ನೂ ತೆಗೆದುಕೊಂಡು ಬಂದಿದ್ದರು. ಈಗ ಸವಾರರ ಕೆಟ್ಟ ಮುಖವನ್ನು ನೋಡಿದ ಕೂಡಲೆ ತಾನು ಅದಾವ ಕೆಟ್ಟ ಸುದ್ದಿಯನ್ನು ಕೇಳಲಿರುವೆನೋ ಎಂದು ಚಿಂತಿಸತೊಡಗಿದನು.

“ದೊರೆಗಳೇ, ತಾವು ಚಂದ್ರಗಿರಿಯಿಂದ ಹೊರಟ ಮರುದಿವಸವೇ ಜಗರಾಯನ ಸುಳಿದಾಟಕ್ಕೆ ಆರಂಭವಾಯಿತು. ಮುಖ್ಯಮಂತ್ರಿಯಾದ ಸರಸರಾಜನೂ ಸೇನಾಪತಿ ಅರುಣಾಚಲನೂ ಬಹಿರಂಗವಾಗಿ ಅವನ ಪಕ್ಷವನ್ನು ವಹಿಸಿದರು. ರಾಜಧಾನಿಯ ಹೊರಗೆ ಉಳಿದಿದ್ದ ಜಗರಾಯನು ಪ್ರಬಲನಾಗಿಯೇ ಇದ್ದನು. ಕೋಟೆಯ ಒಳಗೂ ಆಯಕಟ್ಟಿನ ಜಾಗಗಳಿಗೆಲ್ಲ ಅವನ ಜನರು ಇರಹತ್ತಿದ್ದರು. ದೊರೆಗಳು ಈ ಪುಂಡರ ಪಾರುಪತ್ಯಕ್ಕಾಗಿ ತಮ್ಮ ಸೈನ್ಯವನ್ನು ಅಣಿಗೊಳಿಸುತ್ತಿರಲು, ಜಗರಾಯನ ಪಕ್ಷದ ವಕೀಲನೊಬ್ಬನು ಬಂದು, ದೊರೆಗಳು ತಮ್ಮನ್ನು ಕ್ಷಮಿಸಬೇಕೆಂತಲೂ, ತಮ್ಮದು ತಪ್ಪಾಯಿತೆಂತಲೂ ಅಪ್ಪಣೆಯಾದರೆ ಸನ್ನಿಧಾನದ ಚರಣಕ್ಕೆ ಎರಗುವೆವೆಂತಲೂ, ವಿನಯದ ಪತ್ರವೊಂದನ್ನು ತಂದನು. ಸರಳ ಹೃದಯದ ನಮ್ಮ ದೊರೆಗಳು ಅದನ್ನು ನಂಬಿದರು. ಜಗರಾಯನು ಸೈನ್ಯಸಮೇತನಾಗಿಯೇ ಒಳಗೆ ನುಗ್ಗಿದನು. ದಳವಾಯಿ ಅರುಣಾಚಲನು ಕೋಟೆಯ ಎಲ್ಲ ಬಾಗಿಲುಗಳನ್ನು ತನ್ನ ವಶಕ್ಕೆ ತೆಗೆದುಕೊಂಡನು. ಆದರೂ ನಮ್ಮ ಅಧಿಪತಿಯಾದ ವೀರನರಸಿಂಗನು

ಶೌರ್ಯದಿಂದ ವೈರಿಗಳನ್ನು ಎದುರಿಸತೊಡಗಿದನು. ಪರಿಸ್ಥಿತಿಯನ್ನು ನಿವೇದಿಸಿ ತಮ್ಮನ್ನು ಕರೆತರಲಿಕ್ಕೆ ಅಪ್ಪಣೆಯಾದ್ದರಿಂದ ಎಲ್ಲಿಯೂ ನಿಲ್ಲದೆ ತಮ್ಮೆಡೆಗೆ ಧಾವಿಸಿದ್ದೇವೆ. ದೊರೆಗಳಿಗೆ ತಮ್ಮ ಮದುವೆಯ ವಿಚಾರ ಗೊತ್ತೇ ಇರಲಿಲ್ಲ" ಎಂದು ಸವಾರರ ಮುಖ್ಯಸ್ಥನು ಉಸುರಿದನು.

ತಿಳಿದೂ ತಿಳಿದೂ ತಾನು ಅರಸನನ್ನು ಬಿಟ್ಟು ಬಂದದ್ದಕ್ಕೆ ಎಚ್ಚಮನಾಯಕನು ತನ್ನನ್ನು ಮನಸ್ಸಿನಲ್ಲಿ ಬಹಳವಾಗಿ ಹಳಿದುಕೊಳ್ಳಹತ್ತಿದನು. ಅಲ್ಲಿ ನೆರೆದಿದ್ದ ಎಲ್ಲರಿಗೂ ಈ ವಿಷಯದ ಚಿಂತೆಯು ಬಾಧಿಸುತ್ತಿರಲು ಮುದ್ದು ರಂಗನು ತನ್ನ ಕಿರುಗತ್ತಿಯನ್ನು ಹಿರಿದು, ಹಿಂದಿನಿಂದ ಎಚ್ಚಮನಾಯಕನ ಮೇಲೆ ಪ್ರಯೋಗಿಸುವಷ್ಟರಲ್ಲಿ, ಬದಿಯಿಂದ ಧಾವಿಸಿಬಂದ ಕುಮುದಿನಿಯು ಬಲವಾಗಿ ಅವನ ಎದೆಗೆ ತನ್ನ ಉಡಿಯಲ್ಲಿ ಇಟ್ಟುಕೊಂಡಿದ್ದ ಕಿರುಗತ್ತಿಯನ್ನು ಪ್ರಯೋಗಿಸಿದಳು. "ಹಾಯ್! ಹಾಯ್!" ಎಂದು ಚೀರುತ್ತ ಕೊಲೆ ಗಡಕನು ನೆಲಕ್ಕುರುಳಿದನು. ಅವನ ಅನುಯಾಯಿಗಳು ಕೆಲವರು ಈ ಮೊದಲೇ ಖಡ್ಗವನ್ನು ಹಿರಿದು, ತಮ್ಮ ಮುಖ್ಯಸ್ಥನ ರಕ್ಷಣೆಗೆಂದು ಸಿದ್ಧತೆಯಲ್ಲಿರುವಾಗ, ಅರಮನೆಯ ಕಾವಲುಗಾರರು ಕೆಲವರನ್ನು ತುಂಡರಿಸಿ ಉಳಿದವರನ್ನು ಬಂಧಿಸಿದರು. ಶಯನಗೃಹವು ರಕ್ತಮಯವಾಯಿತು.

ಅರಮನೆಯ ಪಾರುಪತ್ಯಗಾರನ ಆಜ್ಞೆಯಂತೆ ಎಲ್ಲರೂ ಹೊರಟು ಹೋಗಿ, ಎಚ್ಚಮನಾಯಕ ಹಾಗೂ ಕುಮುದಿನಿ ಇಬ್ಬರೇ ಉಳಿದರು. ಕುಮುದಿನಿಯ ಮುಖವೂ ಕಣ್ಣುಗಳೂ ಕೆಂಪಾಗಿದ್ದವು. ಹುಬ್ಬುಗಳು ಗಂಟಿಕ್ಕಿದ್ದವು. ಸುಂದರವಾದ ಕೆಳದುಟಿಯು ನಡುಗುತ್ತಿತ್ತು. ಆಗ ಆಕೆಯು ತನ್ನ ಪತಿಯ ಕೈಹಿಡಿದು, "ಏಳಿರಿನ್ನು ತಡವೇಕೆ? ಸ್ವಾಮಿಗೊದಗಿದ ವಿಪತ್ತನ್ನು ನಿವಾರಿಸುವ ಕಾರ್ಯದಲ್ಲಿ ನಮ್ಮ ದೇಹಗಳು ಸವೆದು ಹೋಗಲಿ. ಇಲ್ಲಿಯ ವರೆಗೆ ಸಮಾಧಾನದಿಂದ ಆಗಿಹೋಗಿದ್ದ ವಿವಾಹ ಕಾರ್ಯಗಳು ಆಗಿ ಹೋದವು. ಇನ್ನೆಲ್ಲಿಯ ಸಮಾರಂಭಗಳು? ತಾವು ನನ್ನ ಪಾಣಿಗ್ರಹಣ ಮಾಡುತ್ತಿರುವಾಗ, ಸ್ವಾಮಿಗೆ ವಿಪತ್ತು ಒದಗಿದ್ದರಿಂದ ನಾನೇ ವಿಪದ್ರೂಪವಾದಂತಾಯಿತು. ಈ ಅಪರಾಧದ ಪ್ರಾಯಶ್ಚಿತ್ತಕ್ಕಾಗಿ ಸ್ವಾಮಿಕಾರ್ಯವನ್ನು ಸಾಧಿಸುವ ವರೆಗೆ ವಿಷಯಸುಖದ ನೆರಳಿಗೆ ಹೋಗಲಿಕ್ಕಿಲ್ಲೆಂದು ಶ್ರೀ ಗುರುಸ್ಮರಣದಿಂದ ನಾನು ತಮ್ಮ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡುತ್ತೇನೆ."

ಕುಮುದಿನಿಯ ಸಾಹಸವನ್ನೂ ಘೋರ ಪ್ರತಿಜ್ಞೆಯನ್ನೂ ನೋಡಿ ಎಚ್ಚಮನಾಯಕನು ಆಶ್ಚರ್ಯಪಟ್ಟನು. ಆಗ ಅವನು ಹೆಂಡತಿಯನ್ನು ಪರಮಾದರದಿಂದ ತಬ್ಬಿಕೊಂಡು, "ಪ್ರಿಯೇ, ನಿನ್ನ ಜಾಗರೂಕತೆಯಿಂದಲೇ ನಾನು ಇಂದು ಜೀವದಿಂದ ಉಳಿದೆ. ಸ್ವಾಮಿಕಾರ್ಯವನ್ನು ನೇರವೇರಿಸುವ ವಿಷಯದಲ್ಲಿ ನೀನು ಮಾಡಿದ ಪ್ರತಿಜ್ಞೆಯು ನನಗೆ ಎಷ್ಟೊಂದು ಸಹಾಯಕವಾಗಿದೆಯೆಂಬುದನ್ನು ಹೇಗೆ ಹೇಳಲಿ ? ಇದೆಲ್ಲವೂ ಜಗರಾಯನ ಮೋಸದಿಂದ ಆಯಿತು. ಉಡುಗೊರೆಯನ್ನು ತಂದ ಮುದ್ದುರಂಗನು ಮೊನ್ನೆ ಮೊನ್ನಿನ ವರೆಗೆ ನಮ್ಮ ಕಡೆಗೇ ಇದ್ದನು. ಅಂತೆಯೇ ನನಗೆ ಸಂಶಯಬರಲಿಲ್ಲ. ಅವನನ್ನು ಜಗರಾಯನು ಅದಾವಾಗ ಒಡಕೊಂಡನೊ ತಿಳಿಯದು. ನನ್ನೊಬ್ಬನನ್ನು ನುಂಗಿಸಿಬಿಟ್ಟರೆ ತನ್ನ ಮಾರ್ಗವು ಸುಗಮವೆಂದು ಅವನು ಸ್ವಾಭಾವಿಕವಾಗಿಯೆ ತಿಳಿದಿದ್ದಾನೆ. ಆದರೆ ನಿನ್ನಂತಹ ಅರ್ಧಾಂಗಿಯು ನೆರಳಿನಂತೆ ಸಹಾಯ ಮಾಡಲು ಒಪ್ಪಿಕೊಂಡಿರುವದರಿಂದ ಸ್ವಾಮಿಕಾರ್ಯಕ್ಕಾಗಿ ಪ್ರತ್ಯಕ್ಷ ಯಮನ ಕೋರೆಗಳನ್ನು ಮುರಿಯುವ ಪ್ರಸಂಗ ಬಂದರೂ ನಾನು ಹಿಂದೆಮುಂದೆ ನೋಡುವದಿಲ್ಲ. ನಡೆ, ನಿನ್ನ ಪವಿತ್ರ ಪ್ರತಿಜ್ಞೆಗೆ ಭಂಗ ಬಾರದಂತೆ ನಾನು ನಡಕೊಳ್ಳುವೆನೆಂದು ನಾನಾದರೂ ಪ್ರತಿಜ್ಞಾಪೂರ್ವಕವಾಗಿ ಹೇಳುತ್ತೇನೆ" ಎಂದನು.

ಅಷ್ಟರಲ್ಲಿ ಪಾರುಪತ್ಯಗಾರನು ತಮ್ಮ ಕೋಟೆಗೆ ಸೈನ್ಯವು ಮುತ್ತಿದೆಯೆಂದು ಹೇಳಿದನು. ಜಗರಾಯನ ಹಂಚಿಕೆಯ ಪ್ರಕಾರ, ಮುದ್ದುರಂಗನು ಎಚ್ಚಮನಾಯಕನನ್ನು ಕೊಲೆ ಮಾಡಬೇಕೆಂತಲೂ ಅವನ ಕೆಲವು ಹಸ್ತಕರು ಕೋಟೆಯ ಬಾಗಿಲಿನ ಕಾವಲುಗಾರರನ್ನು ಕೊಂದು ಸೈನಿಕರನ್ನು ಒಳಗೆ ಬಿಡಬೇಕೆಂತಲೂ ಗೊತ್ತಾಗಿದ್ದಿತು. ಆದರೆ ಅವನ ಪ್ರಕಾರ ಕಾರ್ಯವೆಸಗದೆ, ಮುದ್ದುರಂಗನು ಕುಮುದಿನಿಯ ಖಡ್ಗಕ್ಕೆ ಆಹುತಿಯಾದನು. ಮುತ್ತಿಗೆ ಹಾಕಿದ ಜಗರಾಯನ ಸೈನ್ಯವು ಸಾವುನೋವುಗಳನ್ನನುಭವಿಸಿ ಪಲಾಯನ ಹೇಳಿತು.

ಎಚ್ಚಮನಾಯಕನು ತನ್ನ ಸೈನ್ಯದೊಡನೆ ಚಂದ್ರಗಿರಿಗೆ ಹೊರಟನು. ತೇಜೋವಿಶೇಷದಿಂದ ಬೆಳಗುತ್ತಿದ್ದ ಕುಮುದಿನಿಯು ಪುರುಷ ವೇಷದಲ್ಲಿ

ಅಶ್ವಾರೂಢಳಾಗಿ ಬೆನ್ನ ಹಿಂದಿದ್ದುದನ್ನು ಕಂಡು ಅವನಿಗೆ ದೊಡ್ಡ ಬೆಂಬಲವು ದೊರೆತಂತಾಗಿದ್ದಿತು.

ಮಾರ್ಗದಲ್ಲಿ ಎಲ್ಲಿಯೂ ನಿಲ್ಲದೆ, ಚಂದ್ರಗಿರಿಯು ಗಡಿ ಸಮೀಪಿಸುವಷ್ಟರಲ್ಲಿ ಎಲ್ಲ ಕೆಲಸವು ಮುಗಿದುಹೋಗಿದ್ದಿತು. ಜಗರಾಯನ ಸೇನಾಪತಿಯು ಮೊದಲು ಅರಮನೆಗೆ ನುಗ್ಗಿ ಅಸಹಾಯರಾದ ರಾಜನನ್ನೂ ಪರಿವಾರವನ್ನೂ ಸೆರೆಹಿಡಿದು ಬೇರೆಡೆಗೆ ಸಾಗಿಸಿದನು. ರಾಜಪಕ್ಷದವರು ಯಾರೂ ಉಳಿಯದ್ದರಿಂದ ಬಹು ಸುಲಭವಾಗಿ ರಾಜಧಾನಿಯು ಕೈಸೇರಿತು. ಅವನು ಮರುದಿನವೇ ತನ್ನ ಮೊಮ್ಮಗನನ್ನು ಪಟ್ಟದ ಮೇಲೆ ಕುಳ್ಳಿರಿಸಿದನು. ತಾಳಿಕೋಟೆಯ ಕಾಳಗದಲ್ಲಿ ಅಪಜಯವಾದ ಕೂಡಲೇ, ವಿಜಯನಗರ ರಾಯರು ಆನೆ, ಒಂಟೆಗಳ ಮೇಲೆ ಹೇರಿಕೊಂಡು ಚಂದ್ರಗಿರಿಗೆ ತಂದಿದ್ದ ಬಹುತರ ಸಂಪತ್ತು ಅಚ್ಚಳಿದಿದ್ದಿಲ್ಲ. ಆಕಸ್ಮಾತ್ ಅರಸೊತ್ತಿಗೆಯು ಹೋದದ್ದರಿಂದ ವ್ಯಸನಗ್ರಸ್ತನಾಗಿದ್ದ ಬ್ರಾಹ್ಮಣ ಪುತ್ರನು ಜಗರಾಯನ ಪ್ರಯತ್ನದಿಂದ ಸಿಂಹಾಸನವೇರಲು, ಆತನು ಈ ಅಮೋಘವಾದ ಸಂಪತ್ತಿಗೆ ಒಡೆಯನಾದನು. ರಾಜ್ಯವನ್ನೇ ಪಡೆದನು. ಪ್ರಾಣಿಗಳ ಪ್ರಾರಬ್ಧವಶದಿಂದ ಕ್ಷಣದಲ್ಲಿ ತಿಪ್ಪೆಯು ಉಪ್ಪರಿಗೆಯಾಗುತ್ತದೆ. ಉಪ್ಪರಿಗೆಯು ತಿಪ್ಪೆಯಾಗುತ್ತದೆಂಬ ಮಾತು ಸುಳ್ಳಲ್ಲ.

ಚಿಕ್ಕರಾಯನ ಕಾರಾಗೃಹವಾಸದ ವೃತ್ತಾಂತವನ್ನು ಕೇಳಿ ನಾಯಕನು ಸಂತಪ್ತನಾದನು. ಆದರೆ ತನ್ನ ಎಂಟು ಸಾವಿರದ ಸೈನ್ಯದಿಂದ ಬಲಿಷ್ಠನಾದ ಜಗರಾಯನನ್ನು ಎದುರಿಸುವದು ದುಡುಕುತನದ್ದಾಗುವದೆಂದು ತಿಳಿದು ಅಲ್ಲಿಗೇ ಬಿಟ್ಟುಕೊಟ್ಟನು. ಇತ್ತ ಎಚ್ಚಮನಾಯಕನೊಬ್ಬನು ತನ್ನ ಪಕ್ಷವನ್ನು ಹಿಡಿದುಬಿಟ್ಟರೆ ತನ್ನ ಮೊಮ್ಮಗನ ರಾಜ್ಯವು ನಿರಾತಂಕವಾಗುವದೆಂದು ಭಾವಿಸಿ ತನ್ನ ವಕೀಲನೊಡನೆ, "ಎಲೈ ಅಪಕ್ವ ವಿಚಾರದ ತರುಣನೇ, ನಿನ್ನ ಪಕ್ಷದ ಅರಸನು ನಮ್ಮ ಸೆರೆಯಾಳಾಗಿದ್ದಾನೆ. ಅವನನ್ನು ನಾವು ಬೇಕಾದ ಹಾಗೆ ನಡಿಸಿಕೊಳ್ಳಬಹುದು. ಪ್ರಸಂಗ ಬಂದರೆ ಸಂಹರಿಸಲೂ ಬಹುದು. ಈ ಸ್ಥಿತಿಯಲ್ಲಿ ನೀನು ಯಾರ ಸಲುವಾಗಿ ಹೋರಾಡುವದು ? ಅದಾವ ಮಾಂಡಲಿಕ, ಅಥವಾ ಸರದಾರನು ಸಹಾಯ ಮಾಡುವನು ? ಇದನ್ನೆಲ್ಲ ವಿಚಾರಿಸಿ, ವಿವೇಕ

ತನದಿಂದ ಹೊಸ ಅರಸನ ಪಕ್ಷವನ್ನು ಸ್ವೀಕರಿಸುವಲ್ಲಿ ನಿನ್ನದೇ ಕಲ್ಯಾಣವಿದೆ. ಇಲ್ಲದಿದ್ದರೆ ಮಾತ್ರ ರಾಜದ್ರೋಹಿಯೆಂದು ತಿಳಿದು ಕ್ಷಣದಲ್ಲಿ ನಿನ್ನ ಪಾರು ಪತ್ಯ ಮಾಡಬೇಕಾಗುವದು" ಎಂದು ಹೇಳಿಕಳುಹಿದನು.

ಅದಕ್ಕೆ ಉತ್ತರವಾಗಿ ಎಚ್ಚಮನಾಯಕನು, "ಎಲೈ ಜಗರಾಯಾ, ನಿನ್ನ ಹೊಸ ಅರಸನ ಕುಲಗೋತ್ರವಾವದೊ ತಿಳಿಯದಿದ್ದಾಗ ಅವನಿಗೆ ನಾನು ಶರಣು ಬರಲೇ ? ನನ್ನ ವಿಚಾರಗಳು ಪಕ್ವವಿದ್ದರೇನು ? ಅಪಕ್ವವಿದ್ದರೇನು ? ಅವು ಶುದ್ಧಾಂತಃಕರಣದಿಂದ ಸ್ವಾಮಿಯ ಹಿತವನ್ನು ಧ್ಯೇಯವಾಗಿ ಇಟ್ಟು ಕೊಂಡು ಹುಟ್ಟಿರುತ್ತವೆಂಬುದನ್ನು ಚನ್ನಾಗಿ ನೆನಪಿನಲ್ಲಿಡು. ಮುಟ್ಠಾಳನೇ, ಈಗ ನಮ್ಮ ಸ್ವಾಮಿಯನ್ನು ವಿಶ್ವಾಸಘಾತದಿಂದ ಸೆರೆಯಲ್ಲಿಟ್ಟಿರುವೆಯಲ್ಲ, ಅದು ನಿನ್ನ ಪರಿಪಕ್ವ ವಿಚಾರದ ಫಲವಾಗಿರುವದೇನು ? ನಿನ್ನ ಮೊಮ್ಮಗನು ರಾಜವಂಶಜನಲ್ಲವೆಂದು ಗೊತ್ತಿದ್ದರೂ ಸ್ವಪಕ್ಷಾಭಿಮಾನದಿಂದ, ರಾಜ್ಯದಾಶೆ ಯಿಂದ, ನಿಜವಾದ ದೊರೆಯ ಅಹಿತ ಸಾಧಕನಾದ ನೀನು ರಾಜದ್ರೋಹಿಯು ! ನಾನಲ್ಲ ! ಸಮರಾಂಗಣದಲ್ಲಿಯೇ ಎಲ್ಲ ಮಾತಿನ ನಿರ್ಣಯವಾಗುವದು" ಎಂದು ಮರಳಿ ಹೇಳಿ ಕಳುಹಿದನು.

ವಕೀಲನು ಹೋದ ಬಳಿಕ ಎಚ್ಚಮನಾಯಕನು ಒಬ್ಬನೇ ತನ್ನ ಡೇರೆ ಯಲ್ಲಿ ಚಿಂತಿಸುತ್ತ ಕುಳಿತಿದ್ದನು. ರಾಜ್ಯದಲ್ಲಿ ರಾಜಪಕ್ಷದವರು ಯಾರಿದ್ದಾರೆ, ತನ್ನ ಮಿತ್ರರಾರು ಎಂದು ನಿಶ್ಚಿತವಾಗಿ ಹೇಳಬರದಂತೆ ಸ್ಥಿತಿ ಇದ್ದಿತು. ವಿಜಾಪುರದ ಬಾದಶಹರ ನೆರವನ್ನು ಪಡೆಯುವದೆ ? ಹಾಗೆ ಮಾಡಿದರೆ ಮುಂದೆ ತನ್ನ ಕಾಲಮೇಲೆ ತಾನೇ ಕಲ್ಲನ್ನು ಹಾಕಿಕೊಂಡಂತೆ ಎಂಬುದು ಖಚಿತ ವಾಯಿತು. ಈ ಪ್ರಸಂಗದಲ್ಲಿ ತಕ್ಕ ಹಾದಿಯನ್ನು ತೋರಿಸುವ ಹಿತಚಿಂತಕರೇ ನಾಯಕನಿಗೆ ಕಾಣದಾದರು.

ಆಗ ನಾಯಕನಲ್ಲಿಗೆ ಕುಮುದಿನಿಯು ಬಂದಳು. ಅವಳನ್ನು ಕಂಡೊಡನೆ ನಾಯಕನ ಮನಸ್ಸು ಚೇತರಿಸಿಕೊಂಡಿತು. "ವಕೀಲನಿಗೆ ತಾವು ಕೊಟ್ಟು ಕಳುಹಿಸಿದ ಉತ್ತರವನ್ನು ಕೇಳಿದ್ದೇನೆ. ಅದು ನಿಮ್ಮಂಥ ವೀರರಿಗೆ ಉಚಿತವೇ ಆಗಿದೆ. ಆದರೆ ಚಿಂತಿಸುತ್ತ ಕೂಡ್ರುವದರಿಂದೇನು ಪ್ರಯೋಜನ ? ಜಗ ರಾಯನೇ ನಮಗೆ ಮಾರ್ಗ ತೋರಿಸಿದ್ದಾನೆನ್ನಬಹುದು. ನಮ್ಮ ಪಕ್ಷವು

ಸತ್ಪಕ್ಷವಾಗಿದ್ದರೂ ರಾಜಪಕ್ಷದ ಒಂದು ಅಂಕುರವು ಇಲ್ಲದ್ದರಿಂದ ಅದು ಬಲಿಷ್ಠವಾಗುವುದಕ್ಕೆ ಪ್ರತಿಬಂಧಕವಾಗಿದೆ."

ಕುಮುದಿನಿಯ ವಿಚಾರಕ್ಕೆ ನಾಯಕನು ಅತ್ಯಂತ ಕೌತುಕಬಟ್ಟನು. "ಪ್ರಿಯೇ, ನಿನ್ನ ಮಾತುಗಳು ಅತ್ಯಂತ ಸಮರ್ಪಕವಾದವುಗಳು. ನಾವು ಈಗ ಹ್ಯಾಗಾದರೂ ಮಾಡಿ, ಒಬ್ಬ ರಾಜಕುಮಾರನನ್ನು ಸಂಪಾದಿಸಬೇಕು. ಹೇಗೂ ನಮ್ಮ ದೊರೆಗಳಿಗೆ ಮೂವರು ಮಕ್ಕಳಿದ್ದಾರೆ. ಒಬ್ಬ ರಾಜಕುಮಾರನು ನಮ್ಮ ಪಾಳೆಯಕ್ಕೆ ಬಂದರೆ ಸಾಕು, ಸಹಸ್ರಾರು ಸೈನಿಕರು ನಮ್ಮನ್ನು ಕೂಡಿ ಕೊಳ್ಳುವರು. ಆದರೆ ಸೆರೆಮನೆಯನ್ನು ಹಗಲಿರುಳು ಕಾಯುತ್ತಿರುವಾಗ ಇದನ್ನು ಸಾಧಿಸುವ ಬಗೆ ಹೇಗೆ ?"

ಕುಮುದಿನಿಯೂ ಪತಿಯ ಪ್ರೋತ್ಸಾಹದಿಂದ ಆಲೋಚನಾಪರಳಾದಳು. ಆದರೆ ತಟ್ಟನೆ ಉಪಾಯವು ತೋಚಲೊಲ್ಲದು. ಆಗ ಅವಳ ಕಣ್ಣಿಗೆ, ಅಗಸರವನು ಒಗೆದು ಹಾಕಿದ ಬಟ್ಟೆಗಳ ರಾಶಿಯು ಬಿದ್ದಿತು. ಆಗ ಆಕೆಯು "ಪ್ರಿಯರೇ, ಯುದ್ಧರಂಗದಲ್ಲಿ ಜಗರಾಯನನ್ನು ಎದುರಿಸಿ ಸೋಲಿಸಬಹುದು. ಆದರೆ ರಾಜವಂಶವನ್ನೇ ಅವನು ಸಂಹರಿಸಿದರೆ ಮೂಲಕ್ಕೆ ಕೊಡಲಿ ಹಾಕಿ ದಂತಾದೀತು. ಕಾರಣ ಮರೆಮೋಸದಿಂದಲೇ ಒಬ್ಬ ರಾಜಕುಮಾರನನ್ನು ಕರೆತರಬೇಕು. ನನಗೊಂದು ಹುಂಚಿಕೆಯೇನೊ ತೋರಿದೆ. ನೀವು ಕೂಡಲೇ ರಾಜಪರಿವಾರದ ಬಟ್ಟೆಗಳನ್ನು ಒಗೆಯುವ ಅಗಸನ ಗುರುತುಮಾಡಿಕೊಡ ಬೇಕು. ನನ್ನ ಗುರುವಿನ ಕೃಪೆಯಿಂದ ನಿಮ್ಮ ನೆರವಿನಿಂದ ಯಶಸ್ಸು ಸಾಧಿಸ ಬಹುದೆಂದು ತೋರುತ್ತದೆ" ಎಂದು ನುಡಿದಳು.

ನಾಯಕನು ತನ್ನ ಹೆಂಡತಿಯ ಅಲೌಕಿಕ ಯೋಗ್ಯತೆಯಲ್ಲಿ ಸಂಪೂರ್ಣ ವಿಶ್ವಾಸವನ್ನು ತಾಳಿ, ಒಂದೆರಡು ದಿನಗಳಲ್ಲಿ ಆ ಅಗಸನನ್ನು ಉಪಾಯದಿಂದ ಕರೆಯಿಸಿಕೊಂಡನು. ಮೂವರೂ ಕೂಡಿ ಆಪ್ತಾಲೋಚನೆ ಮಾಡಿದರು. ಅಗಸರ ಜಾತಿಗೆ ಒಪ್ಪುವ ವೇಷವನ್ನು ಧರಿಸಿ, ಕುಮುದನಿಯು ಅವನನ್ನು ಹಿಂಬಾಲಿಸಿ, ಅವನ ಮನೆಯಲ್ಲಿಯೆ ವಾಸವಾಗಿರತೊಡಗಿದಳು.

ಪ್ರತಿನಿತ್ಯ ಒಗೆದ ಬಟ್ಟೆಗಳ ಗಂಟೊಂದನ್ನು ಹೊತ್ತುಕೊಂಡು ಅಗಸ ನೊಡನೆ ಕಾರಾಗೃಹಕ್ಕೆ ಹೋಗುತ್ತಿದ್ದಳು. ಬರುವಾಗ ಮಾನಾಪಮಾನ

ಗಳನ್ನು ಲೆಕ್ಕಿಸದೆ, ಮಾಸಿದ ಬಟ್ಟೆಗಳ ಗಂಟೊಂದನ್ನು ಹೊತ್ತುಕೊಂಡು ತರುತ್ತಿದ್ದಳು.

ಲೋಕೋತ್ತರ ಸುಂದರಿಯಾದ ಕುಮುದಿನಿಯು ದರ್ಶನವೂ ಸಂಭಾಷಣದ ಯೋಗವೂ ಕಾರಾಗೃಹದ ರಕ್ಷಕರಿಗೆ ಅಲಭ್ಯ ಲಾಭಗಳಾಗಿ ತೋರ ಹತ್ತಿದುವು. ಅಗಸನ ಬಳಿಯಲ್ಲಿ ಇಂಥ ರತ್ನವಿರುವದು ಪರಮಾಶ್ಚರ್ಯವು ಎಂದು ಕೆಲವರೆಂಬರೆ. ಹಲವರು ಮುಂದೆ ಹೋಗಿ, ಇವಳನ್ನು ವಶಪಡಿಸುವದು ಸುಲಭವೆಂದು ಭಾವಿಸತೊಡಗಿದರು. ಕುಮುದಿನಿಯಿಂದಾಗಿ ಅಗಸನ ಪ್ರತಿಷ್ಠೆಯೂ ತುಸು ಹೆಚ್ಚಿತು. ಅವನು ಒಳಗೆಹೋಗಿ ಬರುವಾಗ ಅವನನ್ನು ಶೋಧಿಸುವದು ರಕ್ಷಕರ ಕರ್ತವ್ಯವಾಗಿದ್ದಿತು. ಕುಮುದಿನಿಯ ಮುರವತ್ತಿನಿಂದ ಈ ನಿತ್ಯಕ್ರಮದಲ್ಲಿ ಶೈಥಿಲ್ಯವುಂಟಾಯಿತು. ರಾಚಿದೇವನೆಂಬ ಒಬ್ಬನು ಮಾತ್ರ ತನ್ನ ತೀಕ್ಷ್ಣ ದೃಷ್ಟಿಯಿಂದ ಸದಾ ಅವಳನ್ನು ಕಾಯುತ್ತಿರುತ್ತಿದ್ದನು.

ಕಾರಾಗೃಹದಲ್ಲಿ ಒಮ್ಮೆ ಆಕೆಯು ಚಿಕ್ಕರಾಯರ ಕಣ್ಣಿಗೆ ಬೀಳಲು, ಅವರಿಗೆ ಮುಖದ ಗುರುತು ಹತ್ತಿದಂತಾಯಿತು ಯಾರೆಂದು ತಿಳಿಯಲಿಲ್ಲ. ಮರುದಿನ ಆಕೆಯು ರಾಚಿದೇವನ ಕಣ್ಣು ತಪ್ಪಿಸಿ, ದೊರೆಗಳಿಗೆ ವಂದಿಸಿ, ಚಿಕ್ಕ ತಾಡವಾಲೆಯ ಕಾಗದವನ್ನಿಟ್ಟು ಓಡಿ ಬಂದುಬಿಟ್ಟಳು. ವಿಷಯವನ್ನು ಸ್ವಲ್ಪದರಲ್ಲಿಯೆ ತಿಳಿದುಕೊಂಡ ರಾಜಪರಿವಾರವು ಸಂತೋಷದಿಂದ ನಲಿದಾಡಿತು. ಮರುದಿನ ಅವಳನ್ನು ಎದುರುಗೊಳ್ಳಲು ಸಮಸ್ತ ಪರಿವಾರವು ಆತುರಗೊಂಡಿದ್ದಿತು. ಪರಾಧೀನತೆಯಿಂದ ತೇಜೋಹೀನರಾಗಿ ತನ್ನ ಸ್ವಾಗತ ಮಾಡುವ ನೆವದಿಂದ ಒಟ್ಟುಗೂಡಿರುವದನ್ನು ನೋಡಿ, ಕುಮುದಿನಿಯು ಹೃದಯವು ಕರಗಿ ನೀರಾಯಿತು.

"ಸಾಧ್ವಿಯೇ, ಸ್ವಾಮಿಭಕ್ತಿಯಿಂದ ನೀನು ಮಾಡುತ್ತಿರುವ ಸಾಹಸಕ್ಕಾಗಿ ಪುರುಷರು ಕೂಡ ಬಟ್ಟುಕಚ್ಚಬಹುದಾಗಿದೆ. ಸದ್ಯಕ್ಕೆ ಶುಷ್ಕ ಧನ್ಯವಾದದ ಹೊರತು ಹೆಚ್ಚಿಗೆ ನಿನಗೆ ಸಲ್ಲಿಸಲು ಈ ಬಡ ದೊರೆಯು ಬಳಿಯಲ್ಲಿ ಏನೂ ಇಲ್ಲ ಕಂಡೆಯಾ? ನೀನು ಕೇಳಿದಂತೆ, ಈ ನಮ್ಮ ಕಿರಿಯ ಮಗು ಚೆನ್ನವೆಂಕಟನನ್ನೇ ಕೊಡುವೆವು. ಅವನನ್ನು ರಕ್ಷಿಸುವ ಭಾರವು ನಿನ್ನನ್ನೂ ನಿನ್ನ ತೇಜೋಮೂರ್ತಿ ಎಚ್ಚಮನಾಯಕನನ್ನೂ ಸೇರಿದೆಯಾದದರಿಂದ ನಾವು

ಈ ವಿಷಯದಲ್ಲಿ ನಿಶ್ಚಿಂತರೇ ಇದ್ದೇವೆ. ತಂಗೀ ! ಹೋಗಿ ಬಾ, ಇಲ್ಲಿ ಹೆಚ್ಚು ಹೊತ್ತು ಕುಳ್ಳಿರುವುದು ಹಿತಕರವಲ್ಲ. ಬೇಗ ಕಳುಹಿಸಿಕೊಡು, ಅವಳನ್ನು " ಎಂದು ಚಿಕ್ಕರಾಯರು ಹೆಂಡತಿಗೆ ಹೇಳಿದರು.

ರಾಚಿದೇವನ ಹೆದರಿಕೆಯಿಂದ ಕುಮುದಿನಿಯು ೩-೪ ದಿನ ಕಾಯಬೇಕಾಯಿತು. ಮುಂದೆ ಎರಡು ದಿನ ಅವನು ಬಾರದ್ದರಿಂದ ಬೇಗನೆ ತನ್ನ ಕಾರ್ಯವನ್ನು ಸಾಧಿಸಬೇಕೆಂದಳು. ಅದೇ ದಿನ ರಾಜಪುತ್ರನನ್ನು ಕರೆದೊಯ್ಯಬೇಕೆಂದು ನಿರ್ಧರಿಸಿದಳು. ಅಗಸನಿಗೆ ಹೇಳತಕ್ಕದ್ದನ್ನೆಲ್ಲ ಹೇಳಿ, ಆತನ ಮೊಟ್ಟೆಯಲ್ಲಿ ರಾಜಕುಮಾರನನ್ನು ಅಪಾಯವಾಗದಂತೆ ಮಲಗಿಸಿ, ಅವನಿಗೆ ಧೈರ್ಯ ಹೇಳಿ, ಮೇಲೆ ಮಾಸಿದ ಬಟ್ಟೆಗಳನ್ನು ಹಾಕಿ, ಮೊಟ್ಟೆಯ ಸನಿಯಕ್ಕೆ ಜನರು ಬಾರದಂತೆ ಮಾಡಿದಳು.

ಅಗಸನು "ಸರಿಯಿರಿ ದೇವರು ಮುಟ್ಟೀರಿ !" ಎಂದು ಹೇಳುತ್ತ ನಡೆದನು. ಬಳಿಯಲ್ಲಿ ಸಾಗಿದ್ದ ಕುಮುದಿನಿಯು ಆ ದಿನ ವಿಶೇಷ ತೇಜದಿಂದ ಒಪ್ಪುತ್ತಿದ್ದಳು. ಆಕೆಯು ಸುಹಾಸ್ಯವದನೆಯಾಗಿ, ಕಾವಲುಗಾರರೊಡನೆ ಸವಿಮಾತುಗಳನ್ನಾಡುತ್ತ, "ಮೈಲಿಗೆಯ ಬಟ್ಟೆಗಳು, ಮುಟ್ಟೀರಿ !" ಎಂದು ವಿನಯದಿಂದ ಎಚ್ಚರಿಸುತ್ತಿದ್ದಳು. ಹೀಗೆ ಕುಮುದಿನಿಯು ರಾಜಪುತ್ರನೊಡನೆ ಸೆರೆಮನೆಯ ಬಾಗಿಲುಗಳನ್ನೂ ಕೋಟೆಯ ಬಾಗಿಲುಗಳನ್ನೂ ದಾಟಿ ಅಗಸನ ಮನೆಯನ್ನು ಮುಟ್ಟಿದಳು !

ಮುಂದೆ ಮೂರು ದಿನ ಆಕೆಯು ನಿತ್ಯವೂ ಕಾರಾಗೃಹಕ್ಕೆ ಹೋಗಿ ಬರುತ್ತಿದ್ದಳು. ರಾಚಿದೇವನು ಇನ್ನೂ ಬಂದಿರದಿದ್ದುದನ್ನು ಕಂಡು, ಆಕೆಯು ಆ ರಾತ್ರಿಯೇ ರಾಜಪುತ್ರನನ್ನು ಪತಿಯ ಪಾಳೆಯಕ್ಕೆ ಸಾಗಿಸಬೇಕೆಂದು ಗೊತ್ತುಮಾಡಿಕೊಂಡಳು.

ಅಂದಿನ ತಿಥಿಯು ಜ್ಯೇಷ್ಠ ವದ್ಯ ಚತುರ್ದಶಿಯಾಗಿತ್ತು. ಕಗ್ಗತ್ತಲೆಯು ಮುಸುಕಿ ಹೋಗುವವರಿಗೆ ದಾರಿಯು ಕಾಣಿಸದಂತಿದ್ದಿತು. ಕುದುರೆಯ ಮೇಲೆ ಆಕೆಯು ರಾಜಪುತ್ರನನ್ನು ಮುಂದೆ ಕುಳ್ಳಿರಿಸಿಕೊಂಡು, ಸೇವಕರು, ದಾಸಿ ಮತ್ತು ಅಗಸನೊಡನೆ ಸಾಗಿದ್ದಳು. ಎಚ್ಚಮನಾಯಕನ ಪಾಳೆಯವು ಚಂದ್ರಗಿರಿಯಿಂದ ಏಳು ಮೈಲಿನ ಮೇಲೆ ಇದ್ದಿತು. ಕುಮುದಿನಿಯ

ಪರಿವಾರವು ಒಂದೆರಡು ಮೈಲು ನಡೆದು ಬಂದಿರಬಹುದು. ಅಷ್ಟರಲ್ಲಿ ಒಬ್ಬ ಸವಾರನು ವೇಗದಿಂದ ಕುದುರೆಯನ್ನು ಓಡಿಸುತ್ತ ಬಂದು, ಆಕೆಯ ಕೈಯನ್ನು ಗಟ್ಟಿಯಾಗಿ ಹಿಡಿದು, "ಪರಮಸಾಹಸಿಯಾದ ಸ್ತ್ರೀಯೇ, ನಾನಿಲ್ಲದ ಹೊತ್ತನ್ನು ಸಾಧಿಸಿ, ಕಳವಿನಿಂದ ರಾಜಪುತ್ರನನ್ನು ಎಬ್ಬಿಸಿಕೊಂಡು ಹೋಗುವ ನೀನು, ಕ್ಷುದ್ರರಾದ ಕಾವಲುಗಾರರನ್ನು ವಂಚಿಸಿದಂತೆ ನನ್ನನ್ನು ವಂಚಿಸಲಿಕ್ಕೆ ಸಾಧ್ಯವಿಲ್ಲ. ಸುಮ್ಮನೆ ನೀನು ರಾಜಪುತ್ರನನ್ನು ನನಗೆ ಒಪ್ಪಿಸಿ ಹಿಂತಿರುಗಿ ಹೋಗು. ನಿನ್ನನ್ನು ಸುರಕ್ಷಿತ ಮುಟ್ಟಿಸಲಿಕ್ಕೆ ನನ್ನ ಜನರನ್ನು ಕಳಿಸಿಕೊಡುವೆ ಪುರುಷರಿಗೂ ನೀಗದ ಸಾಹಸಕ್ಕೆ ಕೈಹಾಕಿದ ನೀನು ಅಭಿನಂದನೀಯಳು. ಈಗ ಮಾತ್ರ ರಾಜಪುತ್ರನನ್ನು ಒಪ್ಪಿಸಬೇಕು. ಇಲ್ಲವಾದರೆ ಇದರ ಪರಿಣಾಮವು ಒಳ್ಳೆಯದಾಗದು" ಎಂದು ಹೇಳಿದನು.

ಕುಮುದಿನಿಯು ಮೊದಲ ಪೆಟ್ಟಿಗೆ ಬೆಚ್ಚಿ ಬಿದ್ದಳು. ರಾಜಪುತ್ರನೂ ಅಂಜಿ ಅವಳನ್ನು ಅಪ್ಪಿಕೊಂಡನು. ಆದರೆ ಈ ಅಳುಕುತನವು ಅವಳಲ್ಲಿ ಬಹಳ ಹೊತ್ತು ಉಳಿಯಲಿಲ್ಲ. ಪರಿಸ್ಥಿತಿಯನ್ನು ಎದುರಿಸಲು ಕ್ಷಣದಲ್ಲಿ ಅವಳಲ್ಲಿ ಧೈರ್ಯದ ಸಂಚಾರವಾಯಿತು. ಯಾರಿಗಾಗಿ ಆಕೆಯು ಎಚ್ಚರದಿಂದ ನಡೆದುಕೊಳ್ಳುತ್ತಿದ್ದಳೋ, ಅಂಥ ರಾಚಿದೇವ ಹಾಗೂ ಅವನ ಹತ್ತಿಪ್ಪತ್ತು ಸೈನಿಕರು ತನ್ನನ್ನು ಸುತ್ತುಗಟ್ಟಿದ್ದುದನ್ನು ಆ ಕ್ಷಣಕ್ಕೆ ತೃಣೀಕರಿಸಿದಳು.

"ಪುರುಷಾಧಮಾ, ಬಿಡು ನನ್ನ ಕೈಯನ್ನು. ನಿರ್ಲಜ್ಜತನದಿಂದ ಪರಸ್ತ್ರೀಯನ್ನು ಮುಟ್ಟುವ ನಿನ್ನ ಕೈಯ ತಟ್ಟನೆ ಹುಳಿತುಹೋಗಲಿಕ್ಕಿಲ್ಲವೆ? ನಾನಂತೂ ಕಳ್ಳಿಯು ಸರಿ! ಆದರೆ ಮಾರ್ಗಸ್ಥರ ಮೇಲೆ ಮುಗಿಬಿದ್ದು ಅಬಲೆಯೂ ದಾಸಿ–ಸೇವಕರೂ ಬಾಲಕನೂ ಇವರನ್ನು ಮುತ್ತುವ ನೀನೆಂಥ ದೊಡ್ಡ ಸಂಪನ್ನನು? ದೊರೆಗಳಾದವರನ್ನು ಮೋಸದಿಂದ ಸೆರೆಮನೆಯಲ್ಲಿರಿಸಿದ ನಿನ್ನ ಒಡೆಯನು ಮಹಾಸಂಪನ್ನನೆನ್ನಲೆ? ಈಗಂತೂ ಈ ರಾಜಕುಮಾರನನ್ನು ನಾನು ಜೀವದಿಂದಿರುವ ವರೆಗೆ ಅದಾವ ಗಂಡಸು ಅಪಹರಿಸಿಕೊಂಡು ಹೋಗುತ್ತಾನೋ ನೋಡುತ್ತೇನೆ!"

ಕುಮುದಿನಿಯ ಈ ಮಾತುಗಳಿಗೆ ರಾಚಿದೇವನು ನಾಚಿ, ತುಸು ದೂರ ಸರಿದನು. ಪರಸ್ತ್ರೀಯೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೆ ಆ ಪಾಪ ಭೀರುವಿನ

ಹಸ್ತವು ಕುಮುದಿನಿಯು ಕೈಯನ್ನು ಬಿಟ್ಟುಕೊಟ್ಟಿತ್ತು. ಆಗ ಅವನು ಕುಮುದಿನಿಯನ್ನು ಕುರಿತು, "ಅಮ್ಮಾ, ನೀನು ಯಾರೆಂಬುದು ನನಗೆ ತಿಳಿಯದು, ಆದರೆ ನೀನು ಘನವಂತಳೆಂಬುದು ನಿಜ. ಪಾಪವಾಸನೆಯಿಂದ ನಾನು ನಿನ್ನ ಕೈಹಿಡಿದಿಲ್ಲ. ಪತಿವ್ರತೆಯರ ಶಾಪವು ಪ್ರಜ್ವಲಿತವಾದ ಅಗ್ನಿಯೆಂದು ನನ್ನ ಗುರುಗಳಾದ ಚಿತ್ರದುರ್ಗದ ಮುರುಘಾ ರಾಜೇಂದ್ರರು ಹೇಳಿರುವದರಿಂದ ನಾನು ಯಾವಾಗಲೂ ಅದಕ್ಕೆ ಅಂಜಿ ನಡೆಯುತ್ತೇನೆ. ಆದರೆ ನೀನು ಏನು ಹೇಳಿದರೂ ರಾಜಪುತ್ರನನ್ನು ಬಿಟ್ಟು ಹೋಗುವವನಲ್ಲ. ನೀನು ಅಬಲೆ ಹಾಗೂ ರಾಜಪುತ್ರನು ಮಗುವು. ನಿಮಗೆ ಯಾರಿಗೂ ಅಧರ್ಮವಾಗದಂತೆ, ನನ್ನ ಸ್ವಾಮಿಯ ಕಾರ್ಯದ ಸಾಧನೆಯಾಗುವಂತೆ ಧರ್ಮಯುದ್ಧದ ಉಪಾಯವನ್ನು ಯೋಚಿಸುತ್ತಿದ್ದೇನೆ" ಎಂದನು.

ಅದಕ್ಕೆ ಕುಮುದಿನಿಯು, "ರಾಚಿದೇವಾ, ನಿನಗೆ ನಿನ್ನ ಸ್ವಾಮಿಯ ಕಾರ್ಯಸಾಧನೆ ಮುಖ್ಯವಾದರೆ, ನನಗೆ ಈ ರಾಜಪುತ್ರರ ರಕ್ಷಣೆಯು ಆದ್ಯ ಕರ್ತವ್ಯವಾಗಿದೆ. ನಾನೇ ಯುದ್ಧಕ್ಕೆ ಸಮ್ಮತಿ ಕೊಡುತ್ತೇನೆ. ನಾವಿಬ್ಬರೂ ಯುದ್ಧ ಮಾಡೋಣ. ನಿನ್ನಿಂದ ನಾನು ಪರಾಜಿತಳಾದರೆ ನೀನು ರಾಜಪುತ್ರನನ್ನು ವಶಪಡಿಸಿಕೊಂಡು ಹೋಗಬಹುದು. ನೀನು ಸೋತದ್ದಾದರೆ ಸುಮ್ಮನೆ ನನ್ನನ್ನು ಹೋಗಗೊಡು. ಇದು ಧರ್ಮಯುದ್ಧವಾಗುವದೋ ಇಲ್ಲವೋ ಎಂಬ ಬಗ್ಗೆ ಸಂಶಯವಿದ್ದರೆ, ಚಿತ್ರದುರ್ಗದ ಅಧಿಪತಿಗಳಾದ ದುರಗಪ್ಪ ನಾಯಕರು ನೀತಿ ವಿಶಾರದರೆಂತಲೂ ಧರ್ಮಯುದ್ಧದ ಅಭಿಮಾನಿಗಳೆಂತಲೂ ನನ್ನ ಪತಿಯ ಬಾಯಿಂದ ಕೇಳಿದ್ದೇನೆ. ಅವರನ್ನು ಕೇಳಿಕೊಂಡು ಬಾ, ನಾನು ನನ್ನ ಪತಿಯಾದ ಎಚ್ಚಮನಾಯಕರ ಬಳಿಗೆ ಹೋದಮೇಲೂ, ನನ್ನ ಮಾತಿನಂತೆ ನಡೆದುಕೊಳ್ಳಲು ಸಿದ್ಧಳಿದ್ದೇನೆ. ನನ್ನ ಪತಿದೇವರು ಇದಕ್ಕೆ ಒಪ್ಪದಿದ್ದರೆ ವಚನ ಭಂಗ ದೋಷದ ಪ್ರಾಯಶ್ಚಿತ್ತಕ್ಕಾಗಿ ಅಗ್ನಿಪ್ರವೇಶ ಮಾಡುವೆನು."

ಆದರೆ ರಾಚಿದೇವನು ಸ್ತ್ರೀಯ ಮೇಲೆ ಶಸ್ತ್ರವನ್ನೆತ್ತಲು ಎಳ್ಳಷ್ಟೂ ಸಮ್ಮತಿಸಲಿಲ್ಲ. ಕಾರಣ ಅವನು "ತಾಯೀ, ನೀನು ಯಥಾಯೋಗ್ಯವಾದುದನ್ನೇ ಹೇಳಿದೆ. ಸಾತ್ವಿಕ ವೃತ್ತಿಯ ಸದುಪದೇಶದಿಂದಲೇ ನನ್ನನ್ನು

ಜಯಿಸಿದ ನಿನಗೆ ನನ್ನ ನಮಸ್ಕಾರಗಳು! ಅವಶ್ಯವಾಗಿ ನೀನು ರಾಜಪುತ್ರ ರೊಡನೆ ಮುಂದೆ ಸಾಗಬಹುದು" ಎಂದನು.

ಆಗ ಕುಮುದಿನಿಯು ಕುದುರೆಯಿಂದಿಳಿದು ಅವನಿಗೆ ವಂದಿಸಿ, "ಎಲೈ ಪುರುಷಶ್ರೇಷ್ಠನೇ, ನಿನ್ನ ಧರ್ಮಬುದ್ಧಿಗೆ ನಾನು ತಲೆಬಾಗುತ್ತೇನೆ. ಕನ್ನಡಿಗರ ಇಂಥ ಹೀನ ಸ್ಥಿತಿಯಲ್ಲಿಯೂ ನಿನ್ನಂಥ ಸುಜನರು ಇರುವದು ಸಮಾಧಾನದ ಸಂಗತಿಯು. ನೀನು ಯಾರು ಎಲ್ಲಿಯವನೆಂದು ನಾನು ತಿಳಿಯಬಹುದೆ?"

"ಅಮ್ಮಾ, ನಾನೇ ಚಿತ್ರದುರ್ಗದ ಆ ದುರಗಪ್ಪನಾಯಕನು! ಹಳೆಯ ಮಿತ್ರತ್ವದ ಕಾರಣದಿಂದ ನಾನು ಜಗರಾಯನ ಪಕ್ಷವನ್ನು ವಹಿಸಿದ್ದೇನೆ. ರಾಜಪರಿವಾರವನ್ನು ಗುಪ್ತರೀತಿಯಿಂದ ಕಾಯುವ ಕೆಲಸವನ್ನು ನನಗೆ ಒಪ್ಪಿಸಲಾಗಿತ್ತು. ನನ್ನಲ್ಲಿ ಧರ್ಮಬುದ್ಧಿಯು ಲವಲೇಶವು ಇದ್ದದ್ದಾದರೆ ಮಹಾತ್ಮರಾದ ನನ್ನ ಜಗದ್ಗುರುಗಳ ಸತ್ಸಂಗ ಹಾಗೂ ಸದುಪದೇಶವೇ ಕಾರಣವಾಗಿದೆ" ಎಂದು ನುಡಿದನು.

ಈ ಮಾತುಗಳನ್ನು ಕೇಳಿ ಕುಮುದಿನಿಯು ಬೆರಗಾದಳು. ಅವನ ಬಗ್ಗೆ ಆದರಭಾವ ಹೆಚ್ಚಿತು. ಮೈಮೇಲೆ ಬಂದಿದ್ದ ಪ್ರಸಂಗವು ಹೀಗೆ ನಿರಾತಂಕವಾಗಿ ಕೊನೆಗಂಡದ್ದರಿಂದ ಇಮ್ಮಡಿ ವೇಗದಿಂದ ತನ್ನ ಪತಿಯ ಪಾಳೆಯವನ್ನು ತಲುಪಿದಳು. ರಾಜಪುತ್ರನನ್ನು ಕಂಡ ಮೇಲೆ ಉತ್ಕಟ ಸ್ವಾಮಿನಿಷ್ಠನಾದ ಎಚ್ಚಮನಾಯಕನ ಸ್ಥಿತಿಯು ಏನಾಗಿರಬಹುದೆಂದು ಊಹಿಸಲಿಕ್ಕೆ ಈ ಬಡಲೆಕ್ಕಣಿಕೆಯು ಸಮರ್ಥವಾಗಲಾರದು.

ಇತ್ತ ದುರಗಪ್ಪನಾಯಕನು ಚಂದ್ರಗಿರಿಗೆ ಹೋದ ಕೂಡಲೇ, ರಾಜ ಪುತ್ರನ ಅಪಹಾರದ ಸುದ್ದಿಯು ಎಲ್ಲೆಡೆಗೆ ಹಬ್ಬಿತು. ಜಗರಾಯನ ಧೈರ್ಯವೇ ಉಡುಗಿಹೋದಂತಾಯಿತು. ಧರ್ಮಯುದ್ಧದ ನೆವದಲ್ಲಿ, ಸ್ತ್ರೀದಾಕ್ಷಿಣ್ಯಕ್ಕೆ ಬಿದ್ದು ದ್ರೋಹಮಾಡಿದವನೆಂದು ದುರಗಪ್ಪನಾಯಕನನ್ನು ಅತ್ಯಂತ ಅಪ ಮಾನದ ರೀತಿಯಲ್ಲಿ ಹೀಗಳೆದನು. ಜಗರಾಯನ ಸುತ್ತಲಿದ್ದ, ದುರಗಪ್ಪ ನಾಯಕನ ಉತ್ಕರ್ಷವನ್ನು ಸಹಿಸಲಾಗದ ಕೆಲವರು, ಜಗರಾಯನ ಕೋಪದ ನುಡಿಗಳಿಗೆ ಪುಟಕೊಟ್ಟರು. ದುರಗಪ್ಪನಾಯಕನು ಈ ಅಪಮಾನದಿಂದ ತಪ್ತನಾದರೂ ನಿಗ್ರಹಿಸಿಕೊಂಡು, "ಇನ್ನು ನಾನು ಇಲ್ಲಿ ಉಳಿಯುವದಿಲ್ಲ.

ಹಾಗೆಂದು ನಾನೇನು ಎಚ್ಚಮನಾಯಕನನ್ನು ಕೂಡಿಕೊಳ್ಳುವದಿಲ್ಲ. ಚಿತ್ರದುರ್ಗಕ್ಕೆ ಹೋಗಿ ತಟಸ್ಥನಾಗಿ ಉಳಿಯುವೆ" ಎಂದು ತನ್ನ ನಿರ್ಧಾರವನ್ನು ಹೇಳಿ, ತನ್ನ ದೊಡ್ಡ ಸೈನ್ಯದೊಡನೆ ಹೊರಟು ಹೋಗಿಬಿಟ್ಟನು.

ಇದರಿಂದ ಜಗರಾಯನಿಗಿದ್ದ ಒಂದು ದೊಡ್ಡ ಆಸರೆಯೇ ಕೈಬಿಟ್ಟಂತಾಯಿತು. ದುರಗಪ್ಪನಾಯಕನ ಸ್ನೇಹಿತರಾದ ಕೆಲ ಸರದಾರರು ಈ ನೆವದಿಂದ ಎಚ್ಚಮನಾಯಕನನ್ನು ಕೂಡಿಕೊಂಡರು. ಒಬ್ಬೊಬ್ಬರೇ ಸರದಾರರು ಜಗರಾಯನ ಪಕ್ಷವನ್ನು ಬಿಟ್ಟು ಹೋಗಹತ್ತಿದರು.

ಇದರಿಂದ ಅತ್ಯಂತ ವಿಮಂಚನೆಗೊಳಗಾದ ಜಗರಾಯನು, ತನ್ನ ಮಿತ್ರನಾದ ಇರುಗನಾಯಕನೊಡನೆ ಒಂದು ದಿನ ವಿಚಾರವಿನಿಮಯದಲ್ಲಿ ತೊಡಗಿದ್ದನು.

ಜಗರಾಯ— ಮಿತ್ರಾ, ನಾನು ದುರಗಪ್ಪನಾಯಕನ ಯೋಗ್ಯತೆಯನ್ನು ಅರಿತಿದ್ದೂ ವಿಕಾರವಶನಾಗಿ ಆತನ ಅಪಮಾನವನ್ನು ಮಾಡಿ ಕಳಕೊಂಡೆನಲ್ಲ. ನಾಯಕರ ಹಿಂಡಿಗೆ ಹಿಂಡು ಹೋಗಿ ವೈರಿಗಳನ್ನು ಕೂಡಿಕೊಂಡಿದ್ದರೂ ಚಿಂತೆಯಿದ್ದಿಲ್ಲ. ದುರಗಪ್ಪನಾಯಕನೊಬ್ಬನಿದ್ದಿದ್ದರೆ ಆ ಧೈರ್ಯವೇ ಬೇರೆ ಇತ್ತು.

ಇರುಗನಾಯಕ— ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ದುರಗಪ್ಪನಾಯಕನ ಯೋಗ್ಯತೆಯ ಒಬ್ಬ ಸರದಾರನೇ ನಮ್ಮ ಕಡೆಗೆ ಬರುವವನಿದ್ದಾನೆ.

ಜಗರಾಯ— ನಮ್ಮಲ್ಲಿಯಂತೂ ಅಂಥ ಯೋಗ್ಯತೆಯ ಮನಷ್ಯನಿಲ್ಲ. ಆತ ಮುಸಲ್ಮಾನನೇನು?

ಇರುಗ— ಹೌದು. ಆತನ ಹೆಸರು ಚಾಂದಖಾನನು. ಆತನೇನೊ ಮೊದಲು ಎಚ್ಚಮನಾಯಕನ ಕಡೆಗೆ ಹೋಗಿದ್ದನಂತೆ. ಆದರೆ ಆ ನಾಯಕನು ನೀನು ನಮ್ಮ ಕನ್ನಡ ಸರದಾರರ ಕೈಕೆಳಗಿರಬೇಕೆಂತಲೂ ನಮ್ಮ ಅರಸನಿಗೆ ಸಾಷ್ಟಾಂಗವಂದಿಸಬೇಕೆಂತಲೂ ಹೇಳಿದನಂತೆ; ಖಾನನು ಅದಕ್ಕೆ ಒಪ್ಪದೇ, ಬೇರೆಡೆ ಆಶ್ರಯಕ್ಕಾಗಿ ಕಾದಿದ್ದಾನೆ. ಊರ ಹೊರಗಿನ ಕೆರೆಯ ಬಳಿಯಲ್ಲಿ ತನ್ನ ಡೇರೆ ಹೊಡೆದಿದ್ದಾನೆ.

ಜಗರಾಯ— ಚಾಂದಖಾನನ ಯೋಗ್ಯತೆಯನ್ನು ನಾನು ಕೇಳಿ ಬಲ್ಲೆನು. ಆದರೆ ಅಂಥವನನ್ನು ವಿಜಾಪುರದ ಬಾದಶಹನು ಹೊರಗೆ ಹಾಕಲಿಕ್ಕೆ ಕಾರಣವೇನು ? ಇದರಲ್ಲೇನೊ ಮೋಸವಿದ್ದಂತೆ ಕಾಣುತ್ತದೆ.

ಇರುಗ— ಹಾಗೇನು ಇದ್ದಂತೆ ತೋರುವದಿಲ್ಲ. ಖಾನನು ಬಾದಶಹನ ವಿರುದ್ಧವಾಗಿ, ಎರಡು ಸಾರೆ ಆ ನಾಯಕನಿಗೆ ಸಹಾಯ ಮಾಡಿದ್ದರಿಂದ ಬಾದಶಹನು ಸಿಟ್ಟಾಗಿ ಖಾನನನ್ನು ಹದ್ದುಪಾರು ಮಾಡಿದ್ದಾನೆ. ಇದನ್ನು ನಿನ್ನೆಯೆ ನಾನು ಖಾನನ ಬಾಯಿಂದ ಕೇಳಿದ್ದೇನೆ.

ಜಗರಾಯ— ಆತನು ಅಭಿಮಾನಿಯೂ ಶೂರನೂ ಇರುವನೆಂದು ಕೇಳಿದ್ದೇನೆ. ಯಾರ ಸಹಾಯದಿಂದೇ ಆಗಲಿ, ನಮ್ಮ ಕೆಲಸವಾದರೆ ತೀರಿತು. ಹೇಗಾದರೂ ಮಾಡಿ, ರಾಜಪುತ್ರನನ್ನೂ ಶಕ್ಯವಿದ್ದರೆ ಆ ದುಷ್ಟ ಕುಮುದಿನಿಯನ್ನೂ ಸೆರೆಹಿಡಿದು ತರುವ ಕೆಲಸವನ್ನಷ್ಟು ಒಪ್ಪಿಸಿಬಿಡೋಣ. ಅಲ್ಲಿಯವರೆಗೆ ಅವನು ನಮ್ಮ ಚಾಕರಿಯಲ್ಲಿರಲಿ. ಮುಂದೆ ಅವನಿಗೆ ಅಪ್ಪಣೆಕೊಟ್ಟು ಬಿಟ್ಟರಾಯಿತು.

ಇರುಗ— ಹಾಗಿದ್ದರೆ ನಾಳಿನ ದರ್ಬಾರದಲ್ಲಿ ಅವನನ್ನು ಕರೆಯಿಸಿಬಿಡೋಣ. ಹೇಗೇ ಆಗಲಿ ಎಚ್ಚಮನಾಯಕನ ಸೊಕ್ಕು ಮುರಿಯಲೇಬೇಕು.

ಮರುದಿನ ಜಗರಾಯನ ದರ್ಬಾರವು ನೆರವೇರಿತು. ಖಾನನಿಗೆ ತಮ್ಮ ವೈಭವವನ್ನು ತೋರಿಸಬೇಕೆಂದು, ವಿಶೇಷ ವಸ್ತ್ರಾಭರಣಗಳಿಂದ ಯುಕ್ತರಾಗಿ ಜಗರಾಯನೂ ಇತರ ಸರದಾರರೂ ಬಂದಿದ್ದರು. ಸಿಂಹಾಸನದ ಮೇಲೆ ಕುಳಿತಿದ್ದ ಬ್ರಾಹ್ಮಣ ಪುತ್ರನ ಅಲಂಕಾರವನ್ನಂತೂ ಕೇಳುವದೇ ಬೇಡ. ಆದರೆ ಖಾನನು ತೀರ ಸಾಧಾರಣವಾದ ಉಡುಪು-ತೊಡುಪುಗಳನ್ನು ಧರಿಸಿದ್ದನು. ಅವನ ತೇಜಸ್ಸನ್ನು ನೋಡಿ ನಮ್ಮ ಸೋಗಿನ ಕನ್ನಡ ವೀರರು ಬೆರಗಾದರು.

ಗುಣಲುಬ್ಧನಾದ ಚಾಂದಖಾನನಿಗೆ ವಿಜಯನಗರದ ರಾಯರ ಹಿಂದಿನ ಕೀರ್ತಿ, ವೈಭವಗಳು ಕಣ್ಣಿಗೆ ಕಟ್ಟಿದಂತಾದುವು. ಅದೇ ಸ್ಮೃತಿಯಲ್ಲಿ ಆತನು ಆ ಸಿಂಹಾಸನಕ್ಕೆ ವಂದಿಸಿ, ಕಾಣಿಕೆಯನ್ನಿತ್ತು ತನ್ನ ಸ್ಥಾನದಲ್ಲಿ ಕುಳಿತುಕೊಂಡನು. ಆತನ ಗಾಂಭೀರ್ಯವನ್ನೂ ಸರಳ ವೃತ್ತಿಯನ್ನೂ ಕಂಡು, ನಮ್ಮ

ನಾಗಿದ್ದ ಜಗರಾಯನು, ಅವನ ಬಗ್ಗೆ ಆದರದ ಮಾತುಗಳನ್ನು ಆಡಿ, ಸಹಾಯ ಮಾಡಲು ಕೇಳಿಕೊಂಡನು.'

ಖಾನನು ಅಂದದ್ದೇನಂದರೆ— ತಮ್ಮ ಚಾಕರಿಯನ್ನು ಮಾಡಲು ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ. ಆದರೆ ನನ್ನವು ಕೆಲವು ನಿಯಮಗಳಿವೆ. ಅವೇನೆಂದರೆ, ವಿಜಾಪುರದ ಬಾದಶಹರ ಉಪ್ಪು ಉಂಡವನಾದ್ದರಿಂದ ಅವರ ವಿರುದ್ಧ ಶಸ್ತ್ರವನ್ನೆತ್ತಲಿಕ್ಕೆ ತಾವು ನನಗೆ ಹೇಳಬಾರದು. ಆ ಬಾದಶಹರ ಹೊರತು, ಬೇಕಾದವರ ಮೇಲೆ ಶಸ್ತ್ರ ಹಿಡಿಯಲಿಕ್ಕೆ ನಾನು ಸಿದ್ಧನಿದ್ದೇನೆ. ಆದರೆ ನನಗೆ ಒಪ್ಪಿಸಿದ ಯಾವದೇ ಕಾರ್ಯದ ಬಗ್ಗೆ ನನ್ನನ್ನೇ ಜವಾಬುದಾರ ನೆಂದು ತಿಳಿಯಬೇಕಲ್ಲದೆ, ನನ್ನ ಚಾಕರಿಯ ವಿಷಯದಲ್ಲಿ ಮತ್ತೊಬ್ಬನ ಅಧಿಕಾರವು ನಡೆಯದು. ನಾನು ಯುದ್ಧದಲ್ಲಿ ವೈರಿಗಳನ್ನು ಸೋಲಿಸಿ ಸೆರೆ ಹಿಡಕೊಂಡು ಬಂದರೆ, ಅವರ ಶಿಕ್ಷೆಯ ನಿರ್ಣಯವು ನನ್ನ ಒಪ್ಪಿಗೆಯಿಂದಲೇ ನಡೆಯಬೇಕು. ನಾಲ್ಕನೆಯದೆಂದರೆ, ನಮ್ಮ ಧರ್ಮದಲ್ಲಿ ಒಬ್ಬ ದೇವರಿಗಲ್ಲದೆ ಅನ್ಯರಿಗೆ ಸಾಷ್ಟಾಂಗ ನಮಸ್ಕಾರವಿಲ್ಲ. ಆದ್ದರಿಂದ ರಾಯರ ಎದುರಿಗೆ ಸಾಷ್ಟಾಂಗ ಹಾಕುವ ಬಗ್ಗೆ ಎಲ್ಲರಂತೆ ನನಗೆ ಅಪ್ಪಣೆಯಾಗಬಾರದು. ಇದರಲ್ಲಿ ಯಾವದೇ ಒಂದು ಕರಾರನ್ನು ನಡಿಸಲಿಕ್ಕೆ ತಮ್ಮಿಂದ ಆಗದ ದಿವಸ, ಅಂದಿನ ವರೆಗೆ ಮಾಡಿದ ತಮ್ಮ ಚಾಕರಿಯ ಪ್ರತಿಫಲದ ವ್ಯವಸ್ಥೆಯನ್ನು ಮಾಡಿ ಕೊಂಡು ನನಗೆ ಸರಿ ಕಂಡಂತೆ ನಡೆದುಕೊಳ್ಳುವೆನು. ನನ್ನ ಮಿತ್ರರಾಗಿದ್ದ ಎಚ್ಚಮನಾಯಕರು ಈ ನಿಯಮಗಳಿಗೆ ಒಪ್ಪಲಿಲ್ಲವೆಂದು ತಮ್ಮ ಕಡೆಗೆ ಬಂದಿದ್ದೇನೆ. ಇದರ ಮೇಲೆ ಪ್ರಭುಗಳ ಚಿತ್ತ.

ಖಾನನ ಈ ಸ್ಪಷ್ಟ ಮಾತುಗಳನ್ನೂ ಅವನ ಸ್ವಾಭಿಮಾನಪೂರ್ಣವಾದ ಕರಾರುಗಳನ್ನೂ ಕೇಳಿ ನೆರೆದ ಸರದಾರರು ಬೆಚ್ಚಿಬಿದ್ದರು. ಜಗರಾಯನು ಖಾನನ ಒಗರಿಗೆ ಮನಸ್ಸಿನಲ್ಲಿ ತಲೆದೂಗಿದನು. ಆಡಿದ ಮಾತುಗಳನ್ನು ತಪ್ಪಲಿಕ್ಕಿಲ್ಲೆಂಬ ಭಾವವೂ ಹಿಡಿದ ಕೆಲಸವನ್ನು ಮಾಡಿಯೇ ತೀರೇನೆಂಬ ನಂಬಿಗೆಯೂ ಆತನ ಮಾತುಗಳೊಳಗಿನ ಪ್ರತಿಯೊಂದು ಶಬ್ದದಿಂದ ವ್ಯಕ್ತ ವಾಗುವಂತಿದ್ದಿತು. ದರ್ಬಾರದೊಳಗಿನ ಕೆಲವರಿಗೆ ಇಂಥ ಎಟ್ಟಿಮನುಷ್ಯನ ಚಾಕರಿಯೇ ಬೇಡವೆಂದು ಅನಿಸಿದರೂ ಇನ್ನು ಕೆಲವರು ಇಂಥವರಿಂದಲೇ

ಕಾರ್ಯಸಾಧನೆಯಾಗುವದು ಎಂದು ಭಾವಿಸತೊಡಗಿದರು. ಜಗರಾಯನು "ನಾಳೆ ವಿಚಾರ ಮಾಡಿ ತಮಗೆ ತಿಳಿಸುತ್ತೇವೆ" ಎಂದು ಸಭೆಯನ್ನು ಮುಗಿಸಿದನು.

ಜಗರಾಯನ ಅಪ್ಪಣೆಯಂತೆ ಇರುಗನಾಯಕನು ಖಾನನನ್ನು ಭೆಟ್ಟಿಯಾಗಿ, ಗುಪ್ತವಾಗಿ ರಾಜಪುತ್ರನನ್ನೂ ಕುಮುದಿನಿಯನ್ನೂ ಆದಷ್ಟು ಬೇಗ ಸೆರೆಹಿಡಿದು ತರಬೇಕೆಂಬ ಕಾರ್ಯವನ್ನು ಒಪ್ಪಿಸಿದನು. ಖಾನನು ತಾನು ಈ ಕೆಲಸವನ್ನು ಸಾಧಿಸಿಯೇ ತೀರುವೆನೆಂದು ಆಶ್ವಾಸನೆಯನ್ನು ಕೊಟ್ಟು, ತನ್ನ ಪಾಳಯವು ಊರ ಹೊರಗೆ, ಕೋಟೆಯ ಗೋಡೆಯ ಆಸರೆಯಲ್ಲಿಯೇ ಇರಲಿ ಎಂದು ಕೇಳಿಕೊಂಡನು.

ಇರುಗನಾಯಕನು ಹೋದ ಮೇಲೆ ಚಾಂದಖಾನನು ಆ ರಾತ್ರಿ ನೆಟ್ಟಗೆ ಎಚ್ಚಮನಾಯಕನ ಬಳಿಗೆ ಹೋದನು ! ಹಿಂದಕ್ಕೆ ಆತನು ಎಚ್ಚಮನಾಯಕನಿಗೆ ನೆರವು ನೀಡುವ ಪ್ರತಿಜ್ಞೆಯನ್ನು ಮಾಡಿದ್ದು ವಾಚಕರ ಸ್ಮರಣೆಯಲ್ಲಿರಬಹುದು. ಈಗ ಜಗರಾಯನ ಚಾಕರಿಗೆ ಎಚ್ಚಮನಾಯಕನ ಸಮ್ಮತಿಯಿಂದಲೇ ಬಂದಿದ್ದನು. ನಾಯಕನೂ ಖಾನನೂ ಕೂಡಿ ಆಲೋಚಿಸತೊಡಗಿದರು. ತಾನಿರುವ ಬಿಡಾರದಿಂದ ಅರಸರಿರುವ ಕಾರಾಗೃಹದ ವರೆಗೆ ನೆಲಮಾರ್ಗವನ್ನು ತೋಡಿ, ಅದರಲ್ಲಿಂದ ಅವರನ್ನು ಪಾರುಮಾಡುವದೆಂದು ಅವರು ಹಂಚಿಕೆ ಮಾಡತೊಡಗಿದರು. ಆಗ ಖಾನನು ರಾಜಪುತ್ರನನ್ನೂ ಕುಮುದಿನಿಯನ್ನೂ ಸೆರೆ ಹಿಡಿದು ತರಬೇಕೆನ್ನುವ ಜಗರಾಯನ ವಿಚಾರವನ್ನು ಮಂಡಿಸಿದನು. ಉಭಯರ ಸೈನ್ಯದ ಪ್ರಾಣಹಾನಿಯಾಗದೇ, ಜಗರಾಯನಿಗೆ ಅಶಕ್ಯವಾಗಿ ತೋರದ, ಕಾರ್ಯ ಸಾಧಿಸುವಂಥ ಹಂಚಿಕೆಯು ಅವರಿಗೆ ಬೇಕಾಗಿತ್ತು. ಇಬ್ಬರೂ ಕುಮುದಿನಿಯನ್ನು ಕರೆಸಿಕೊಂಡರು. ಆಗ ಆಕೆಯು ತುಸು ಹೊತ್ತು ಯೋಚಿಸಿ, ಖಾನನಿಗೆ "ಅಣ್ಣಾ, ನನ್ನನ್ನೂ ರಾಜಪುತ್ರರನ್ನೂ ಸೆರೆಹಿಡಿದಂತೆ ತೋರಿಸುವುದು ಕಠಿಣ ಕೆಲಸವಲ್ಲ. ಹಾಗೆ ಮಾಡಿ ಜಗರಾಯನಲ್ಲಿಗೆ ಒಯ್ದು ಬಳಿಕ ತಿರುಗಿ ನಮ್ಮನ್ನು ಈ ದುರ್ಗಕ್ಕೆ ಸುರಕ್ಷಿತ ಮುಟ್ಟಿಸುವದು ಪ್ರಯಾಸದ ಕೆಲಸವಾಗಿರುತ್ತದೆ. ನಮ್ಮನ್ನು ಸೆರೆಹಿಡಿದ ಪ್ರಸಂಗದ ಗದ್ದಲದಲ್ಲಿಯೇ ರಾಜಕುಟುಂಬವನ್ನು ಬಂಧಮುಕ್ತ ಮಾಡಲಿಕ್ಕೆ ಬೇಕು. ಆಗಾಗ ನಾವು ಬೇಟೆಯಾಡುವದಕ್ಕೆ ಹೋಗುತ್ತೇವಷ್ಟೆ. ಆ ಸಂದರ್ಭದಲ್ಲಿ ನೀವು ನಮ್ಮನ್ನು

ಸೆರೆಹಿಡಿಯಬಹುದು. ಎರಡೂ ಕೆಲಸಗಳು ಬಹು ಸೂಕ್ಷ್ಮವಾಗಿರುವದರಿಂದ ಜಾಗರೂಕರಾಗಿರಬೇಕು. ಮೋಸಗಾರಿಕೆಯು ಮುಳ್ಳುಹಾಸಿಗೆಯೆಂಬುದನ್ನು ನಾವು ಮರೆಯಲಾಗದು" ಎಂದಳು.

ಕುಮುದಿನಿಯ ಯುಕ್ತಿಯು ಉಭಯ ವೀರರಿಗೆ ಒಪ್ಪಿಗೆಯಾಯಿತು. ಅದರ ವಿವರಗಳನ್ನೂ ಪರಿಣಾಮ ಪ್ರತಿಕ್ರಿಯೆಗಳನ್ನೂ ಚನ್ನಾಗಿ ಆಲೋಚಿಸಿ ಖಾನನು ಹಿಂತಿರುಗಿದಾಗ, ನಸುಕು ಹರಿಯಲಿಕ್ಕೆ ಬಂದಿತ್ತು.

ಮುಂದೆ ಖಾನನು ಚಾಕರಿಗೆ ಸೇರಿ ಒಂದು ತಿಂಗಳ ಮೇಲಾಗಿದ್ದರೂ ಏನೂ ಕೆಲಸವಾಗದ್ದಕ್ಕೆ ಜಗರಾಯನು ವಿಚಾರಕ್ಕೊಳಗಾದನು. ಇರುಂಗ ನಾಯಕನನ್ನು ಮೇಲಿಂದ ಮೇಲೆ ಕೇಳುತ್ತಿದ್ದನು. ಅದಕ್ಕೆ ಖಾನನು "ಇನ್ನೇನು ಬಹಳ ದಿನಗಳಿಲ್ಲ. ಯುದ್ಧದಿಂದಾಗುವ ಕೆಲಸವಲ್ಲವಿದು. ಕೆಲವೇ ದಿನ ತಡೆಯಿರಿ. ಒಂದು ಉಪಾಯವನ್ನು ಯೋಚಿಸಿದ್ದೇನೆ. ನಾನು ಕೇಳಿದಾಗ ನಿಮ್ಮ ೨೫೦ ಜನ ದಂಡಾಳುಗಳನ್ನು ಕಳಿಸಿ ಕೊಡಿರಿ, ಮಾತ್ರ" ಎಂದು ಹೇಳಿ ಕಳುಹಿದನು.

ಖಾನನು ನೆಲಮಾರ್ಗವು ಸಿದ್ಧವಾಗುವ ದಾರಿಯನ್ನೆ ಕಾಯುತ್ತಿದ್ದನು. ಅದು ಮುಗಿಯಲಿಕ್ಕೆ ಬಂದ ದಿನವೇ ಜಗರಾಯನಿಗೆ ೨೫೦ ದಂಡಾಳುಗಳನ್ನು ಕೊಡಲು ಹೇಳಿ ಕಳುಹಿದನು. ಸಂಗಡ ತನ್ನ ೨೫೦ ಸೈನಿಕರನ್ನು ಜೊತೆಗಿರಿಸಿಕೊಂಡು, ಅರಣ್ಯಕ್ಕೆ ಹೊರಟು ಅಲ್ಲಲ್ಲಿ ಅಡಗಿಕೊಂಡರು.

ಅದೇ ದಿನ ಎಚ್ಚಮನಾಯಕನೂ ಕುಮುದಿನಿಯೂ ರಾಜಪುತ್ರನೊಡನೆ ಬೇಟೆಗೆ ಬಂದಿದ್ದರು. ಬೇಟೆಯನ್ನು ಎಬ್ಬಿಸುವ ನೆವದಲ್ಲಿ ಖಾನನ ಬೇಡರು ಕುಮುದಿನಿಯನ್ನೂ ಸಂಗಡ ಇರುವ ರಾಜಪುತ್ರನನ್ನೂ ದೂರ ಓಡಿಸಿಕೊಂಡು ಜಗರಾಯನ ದಂಡಾಳುಗಳಿರುವತ್ತ ಬಂದರು. ಕೂಡಲೇ ಅವರಿಬ್ಬರನ್ನು ಖಾನನು ಮುತ್ತಿದನು. ಮತ್ತು ಕುಮುದಿನಿಯ ಕಡೆಗೆ ತಿರುಗಿ, "ಎಲೈ ಸಾಹಸಿಯಾದ ಸ್ತ್ರೀಯೇ, ನಿನ್ನನ್ನೂ ರಾಜಪುತ್ರನನ್ನೂ ಸೆರೆಹಿಡಿದು ಜಗರಾಯರಿಗೆ ಒಪ್ಪಿಸಬೇಕೆಂದು ಈಗೊಂದು ತಿಂಗಳಿನಿಂದ ಹೊಂಚು ಹಾಕಿದ್ದೆನು. ನಮ್ಮ ವಸ್ತ್ರಾದಿ ಬೇಡರಿಂದ ಇಂದು ಅದು ಕೈಗೂಡಿತು. ನೀನು ಒಣ ಚಂಡಿತನ ಮಾಡದೆ, ಸುಮ್ಮನೇ ನಮ್ಮ ಸಂಗಡ ಚಂದ್ರಗಿರಿಗೆ ನಡೆ. ನಿಮ್ಮ

ಜೀವಕ್ಕೆ ಅಪಾಯವಾಗದಂತೆ, ಮರ್ಯಾದೆಗೆ ಕುಂದುಬಾರದಂತೆ ನಾನು ನೋಡಿ ಕೊಳ್ಳುತ್ತೇನೆ, ಪ್ರಾಣವನ್ನಾದರೂ ಕೊಟ್ಟೇನು, ಕೊಟ್ಟ ಈ ವಚನವನ್ನು ಮೀರಲಿಕ್ಕಿಲ್ಲ. ಅದಕ್ಕೆ ಈ ದಂಡಾಳುಗಳೇ ಸಾಕ್ಷಿ" ಎಂದೆನ್ನಲು, ಕುಮುಂ ದಿನಿಯು ಸಂತಪ್ತಳಾಗಿ, ಬಡಿದಾಡಿದರೆ ಪ್ರಯೋಜನವಿಲ್ಲವೆನ್ನುವ ಅಸಹಾ ಯತೆಯನ್ನು ಪ್ರಕಟಿಸಿ, ಖಾನನ ವಚನವನ್ನು ಇನ್ನೊಮ್ಮೆ ಅವನಿಂದ ಹೇಳಿಸಿ ಚಂದ್ರಗಿರಿಯತ್ತ ಕುದುರೆಯನ್ನು ತಿರುಗಿಸಿದಳು.

ಗೊತ್ತು ಮಾಡಿದ್ದಂತೆ ಖಾನನ ರಾವುತರು ಎಚ್ಚಮನಾಯಕನ ಸೈನ್ಯವು ಇವರ ದಾರಿಯತ್ತ ಬಾರದಂತೆ ಅಡ್ಡಲಾಗಿ ನಿಂತಿದ್ದಿತು. ಎಚ್ಚಮನಾಯಕನು ಹೆಂಡತಿಯನ್ನೂ ರಾಜಪುತ್ರನನ್ನೂ ಬಿಡಿಸಿಕೊಳ್ಳಲು ದೊಡ್ಡ ಸೈನ್ಯದೊಡನೆ ಹೊರಟು ಅವರಾಗಲೇ ಚಂದ್ರಗಿರಿಯನ್ನು ಪ್ರವೇಶಿಸಿರುವರೆಂಬುದನ್ನು ತಿಳಿದು, ನಿರುಪಾಯದಿಂದ ಹಿಂತಿರುಗಿದಂತೆ ಮಾಡಿದನು.

ಆಡಿದಂತೆ ಖಾನನು ಕುಮುದಿನಿ ಸಹಿತವಾಗಿ ರಾಜಪುತ್ರನನ್ನು ಮರಳಿ ಹಿಡಕೊಂಡು ಬಂದದ್ದಕ್ಕಾಗಿ ಚಂದ್ರಗಿರಿಯಲ್ಲಿಯ ಪ್ರತಿಯೊಬ್ಬರಿಗೂ ಆಶ್ಚರ್ಯ ವಾಯಿತು. ಚಾಣಾಕ್ಷರಾದವರು ಇದರಲ್ಲಿ ಸಂದೇಹ ತಾಳಿದರು. ಜಗ ರಾಯನಂತೂ ಮೊದಲು ನಂಬಿರಲೇ ಇಲ್ಲ. ಆದರೆ ಅವರನ್ನು ಹಿಡಿತರಲು ಹೋಗಿದ್ದ ರಾವುತರ ಮುಖ್ಯಸ್ಥನು ಸಾದ್ಯಂತವಾಗಿ ಹೇಳಿದ ಮೇಲೆ ನಂಬಿಕೆ ಯುಂಟಾಗಿ ಸಂತೋಷಪಟ್ಟನು. ಆದರೆ ಪ್ರಸಂಗ ಬಂದರೆ ಕುಮುದಿನಿ ಯನ್ನೂ ಖಾನನನ್ನೂ ಸೆರೆ ಹಿಡಿಯಬೇಕೆಂದು ಅಲ್ಲಲ್ಲಿ ಗುಪ್ತ ರೀತಿಯಲ್ಲಿ ದಂಡಾಳುಗಳನ್ನು ಇಟ್ಟನು. ಇತ್ತ ಖಾನನೂ ತಮ್ಮ ಸಂರಕ್ಷಣದ ಸಲುವಾಗಿ ಮಾಡತಕ್ಕ ವ್ಯವಸ್ಥೆಯನ್ನು ಮಾಡಿದನು. ಚಂದ್ರಗಿರಿಯ ಹತ್ತಿರ ಎಚ್ಚಮನಾಯಕನು ತನ್ನ ದೊಡ್ಡ ಸೈನ್ಯದೊಡನೆ ಸಜ್ಜಾಗಿ ನಿಂತಿದ್ದನು.

ದರ್ಬಾರದ ದಿನ, ಸಂಜೆಯಾಗುತ್ತ ನಡೆಯಿತು. ಅಗಸರಾಕೆಯ ಸೋಗಿ ನಿಂದ ರಾಜಪುತ್ರನನ್ನು ಅಪಹರಿಸಿಕೊಂಡು ಹೋದ ಕುಮುದಿನಿಯನ್ನು ನೋಡುವದರ ಸಲುವಾಗಿ ಪಟ್ಟಣದಲ್ಲೆಲ್ಲ ವಿಚಿತ್ರವಾದ ಉತ್ಸಾಹವು ತುಂಬಿ ದ್ದಿತು. ಬರಬರುತ್ತ, ದರ್ಬಾರಕ್ಕೆ ಹೋಗುವ ಬೀದಿಗಳು ತುಂಬಹತ್ತಿದುವು. ದರ್ಬಾರದ ಒಳಗೆ ಕಾಲಿಡಲಿಕ್ಕೆ ಕೂಡ ಸ್ಥಳವಿಲ್ಲದಂತೆ ತುಂಬಿ ಹೋಗಿದ್ದಿತು! ಎಲ್ಲೆಲ್ಲಿಯೂ ಸೈನಿಕರ ಸಣ್ಣ ಗುಂಪುಗಳು ಕಾಣುತ್ತಿದ್ದುವು.

ಚಾಂದಖಾನನು ತನ್ನ ಐವತ್ತು ದಂಡಾಳುಗಳನ್ನು ಹಿಂಗಡೆಗೆ ಇಟ್ಟು ಕೊಂಡು ರಾಜಪುತ್ರ ಮತ್ತು ಕುಮುದಿನಿಯೊಡನೆ ಪ್ರವೇಶಿಸುತ್ತಲೂ ದರ್ಬಾರದ ಎಷ್ಟೋ ಜನರ ಹೃದಯುಗಳು ಕಂಪಿಸಿದವು. ಅನೇಕ ಸರದಾರರು ಸ್ವಾಭಾವಿಕವಾಗಿಯೇ ಈ ಪರಿವಾರದ ವಿಷಯದಲ್ಲಿ ಸಹಾನುಭೂತಿಯುಳ್ಳವರಾದರು. ಮೊದಲೇ ತಿಳಿಸಿದ್ದರೂ ತನ್ನ ಸಂಗಡಿಗರಿಬ್ಬರಿಗೆ ಆಸನದ ವ್ಯವಸ್ಥೆಯನ್ನು ಮಾಡಿದ್ದಿಲ್ಲ. ಚಾಂದಖಾನನು ತನ್ನ ಆಸನದಲ್ಲಿ ರಾಜಪುತ್ರನನ್ನು ಕುಳ್ಳಿರಿಸಿ, ಒಂದು ಬದಿಗೆ ತಾನೂ ಇನ್ನೊಂದು ಬದಿಗೆ ಗೋಷೆಯಲ್ಲಿರುವ ಕುಮುದಿನಿಯೂ ನಿಂತರು.

ಆಗ ಜಗರಾಯನು ಎದ್ದು ನಿಂತು, "ಖಾನರೇ, ರಾಜದ್ರೋಹಿಗಳಾದ ಇವರನ್ನು ನೀವು ಈ ಪರಿ ಗೌರವಿಸುವದು ತರವಲ್ಲ. ಅಗಸನ ಸಂಗಡ ಹೊಲಸು ಬಟ್ಟೆಗಳನ್ನು ಹೊತ್ತುಕೊಂಡು ಹೋಗುತ್ತಿದ್ದ ಈ ಹೆಣ್ಣಿಗೆ ಗೌರವದ ಗೋಷೆಯೇಕೆ ? ಏನು ಹಂಚ್ಚಾಟವಿದು ! ಮೊದಲು ಅವರಿಬ್ಬರನ್ನು ಸೆರೆಯಲ್ಲಿಡಬೇಕಾಗಿದೆ. ಆಕೆಯು ಗೋಷೆಯನ್ನು ಮೊದಲು ತೆಗೆಸಿರಿ. ಮುಖ್ಯವಾಗಿ ಈಕೆಗೆ ಯೋಗ್ಯ ಶಾಸನ ಮಾಡಲೇಬೇಕಾಗಿದೆ." ಎಂದನು.

ಆಗ ಖಾನನು ಬಿರುಸು ದನಿಯಲ್ಲಿ, "ಏನಿದು ? ನೀವು ನನ್ನ ವಿನಂತಿಯನ್ನು ಮನ್ನಿಸಿದಂತೆ ಮಾಡಿ ವಿಶ್ವಾಸಘಾತಕತನದಿಂದ ಪ್ರಸಂಗದಲ್ಲಿ ಮಾನಖಂಡನ ಮಾಡುವದು ಸರ್ವಥಾ ಯೋಗ್ಯವಲ್ಲ ! ಇನ್ನಾದರೂ ಹೇಳಿಕೊಳ್ಳುತ್ತೇನೆ, ನಾನು ನಿಮ್ಮ ರಾವುತರ ಸಮಕ್ಷಮ ಕುಮುದಿನಿಗೆ ಕೊಟ್ಟ ವಚನಕ್ಕೆ ಭಂಗವು ಉಂಟಾಗದಂತೆ ನೀವು ನಡೆದುಕೊಳ್ಳಬೇಕು. ಈ ಇಬ್ಬರೂ ಕೈದಿಗಳನ್ನು ನನಗೆ ಒಪ್ಪಿಸಬೇಕು. ಅವರು ಚಂದ್ರಗಿರಿಯನ್ನು ಬಿಟ್ಟು ಹೋಗದಂತೆ ನೋಡಿಕೊಳ್ಳುವದು ನನ್ನನ್ನು ಕೂಡಿದೆ. ಇಷ್ಟು ಮೀರಿ ನಿಮಗನಿಸಿದ್ದನ್ನೆ ನೀವು ಮಾಡುವ ಹಟ ತೊಟ್ಟರೆ, ನನ್ನ ಕಡೆಗೆ ಮಾತು ಇಲ್ಲ." ಎಂದು ಎಚ್ಚರಿಸಿದನು.

"ಅದೆಲ್ಲ ಇರಲಿ. ಈಕೆಯು ತನ್ನ ಗೋಷೆಯನ್ನು ತೆಗೆಯಲಿಕ್ಕೇಬೇಕು. ನೀವು ನಿಮ್ಮ ಪೌರುಷವನ್ನು ಕೊಚ್ಚಿಕೊಳ್ಳುವದಕ್ಕಾಗಿ ಯಾವದೋ ಸ್ತ್ರೀಯನ್ನು ಗೋಷೆಯ ನೆವದಲ್ಲಿ ತಂದದ್ದಾದರೆ ನಮಗೆ ಹೇಗೆ ತಿಳಿಯಬೇಕು ?" ಎಂದು ಜಗರಾಯನು ಅಬ್ಬರಿಸಿದನು.

ಏನಾದರೂ ಗೋಷೆಯನ್ನು ತೆಗೆಯಗೊಡುವದಿಲ್ಲವೆಂದು ಖಾನನು ತನ್ನ ಕತ್ತಿಯನ್ನು ಹಿರಿದು ನಿಂತನು. ಈ ಗದ್ದಲದಲ್ಲಿ ರಾಜಪುತ್ರನಿಗೆ ಅನ್ಯಾಯವಾದೀತೆಂದು ಕುಮುದಿನಿಯು ತಾನೇ ಗೋಷೆಯನ್ನು ಬಿಸುಟು ನಿಂತಳು. ಅವಳ ರುದ್ರಸುಂದರ ಮೂರ್ತಿಯನ್ನು ಹೆಚ್ಚು ನೋಡಲೊಲ್ಲದೆ ದರ್ಬಾರದ ಜನರೆಲ್ಲ ತಲೆತಗ್ಗಿಸಿದರು. ಆಗ ಕುಮುದಿನಿಯು, "ರಾಜಪ್ರತಿನಿಧಿಗಳೇ, ನಾನು ಕುಮುದಿನಿಯು ಹೌದೋ ಅಲ್ಲವೋ ಅವಶ್ಯವಾಗಿ ನೋಡಿಕೊಳ್ಳಿರಿ. ಪತಿವ್ರತೆಯರ ಮಾನಭಂಗ ಮಾಡುವದು ವಿಜಯನಗರದ ರಾಯರ ಶೀಲವಲ್ಲ. ಬ್ರಾಹ್ಮಣರನ್ನೂ ಗೋಗಳನ್ನೂ ಹುಡುಗರನ್ನೂ ಸ್ತ್ರೀಯರನ್ನೂ ಸೆರೆಯಲ್ಲಿರಿಸಲಾಗದೆಂದು ಸ್ಮೃತಿಗಳಲ್ಲಿ ಹೇಳಿರುತ್ತದೆ. ಹನ್ನೆರಡು ವರ್ಷದ ಈ ರಾಜ ಬಾಲಕನನ್ನೂ, ಹೆಂಗುಸಾದ ನನ್ನನ್ನೂ ಸೆರೆಯಲ್ಲಿಡಲಿಕ್ಕೂ ಶಿಕ್ಷಿಸಲಿಕ್ಕೂ ಆತುರಪಡುವವರಾದ ನೀವು ವಿಜಯನಗರದ ರಾಯರು ಎಂತಾದೀರಿ? ಅಗಸರಾಕೆಯೆಂದು ನನ್ನನ್ನು ಹೀಯಾಳಿಸುವದು ಪೌರುಷತನದ ಲಕ್ಷಣವಲ್ಲ. ಕಾರ್ಯಾರ್ಥಿಯಾದ ನಾನು ಅಗಸರ ಮೊಟ್ಟೆಯನ್ನು ಹೊತ್ತೇ ಆಗಲಿ, ಕಾರ್ಯವನ್ನು ಸಾಧಿಸಿದಾಗ. ಪೌರುಷಶೀಲರಾದ ನೀವೆಲ್ಲಿ ಅಡಗಿದ್ದೀರಿ? ಚಾಂದಖಾನರು ಮೋಸದಿಂದ ನಮ್ಮನ್ನು ಸೆರೆ ಹಿಡಿದರೂ ನಮಗೆ ಅಪಮಾನವಾಗದಂತೆ ನೋಡಿಕೊಳ್ಳುವ ವಚನ ಕೊಟ್ಟಿದ್ದರೆಂದೇ ನಾವು ಇಲ್ಲಿಗೆ ಬಂದೆವು. ಇಲ್ಲವಾದರೆ ಅಲ್ಲಿಯೇ ಜೀವ ಕೊಡುತ್ತಿದ್ದೆವು. ಎಲೈ ದರ್ಬಾರದ ಜನರೇ, ಈಗ ಅಬಲೆಯಾದ ನಾನೂ ಕೂಸಾದ ರಾಜಪುತ್ರರೂ ನಿಮ್ಮೆಲ್ಲರ ಮಾನವತೆಯ ಮೇಲೆ ವಿಶ್ವಾಸವಿಟ್ಟು ನನ್ನ ಪತಿಯ ಬಳಿಗೆ ಹೊರಟು ಹೋಗುತ್ತೇವೆ. ಕೊಟ್ಟ ಮಾತಿನಂತೆ ನಡೆವರಾದರೆ ಚಾಂದಖಾನರೂ ನಮ್ಮನ್ನು ರಕ್ಷಿಸಲಿ" ಎಂದು ಹೇಳಿ ರಾಜಪುತ್ರನನ್ನು ಮೇಲಕ್ಕೆಬ್ಬಿಸಿ ನಡೆದುಬಿಟ್ಟಳು.

ಕೂಡಲೆ ಚಾಂದಖಾನನ ಉಗ್ರ ದಂಡಾಳುಗಳು ವ್ಯೂಹವನ್ನು ರಚಿಸಿ ಅವಳನ್ನು ರಕ್ಷಿಸುತ್ತ ದರ್ಬಾರದ ಹೊರಗೆ ಬಂದರು. ಅವರನ್ನು ತಡೆಯುವ ಧೈರ್ಯವು ಯಾರಿಗೂ ಆಗಲೊಲ್ಲದು. ಊರ ಗಡಿಯಲ್ಲಿ ಮಾತ್ರ ತುಸು ಚಕಮಕಿಯಾಗಲು, ಚಾಂದಖಾನನ ಹೆಚ್ಚಿನ ದಂಡಾಳುಗಳು ಜಗರಾಯನ ಜನರ ಸಮಾಚಾರವನ್ನು ತೆಗೆದುಕೊಳ್ಳಹತ್ತಿದರು. ಅಷ್ಟರಲ್ಲಿ ಖಾನನು ಕುಮು

ದಿನಿ, ರಾಜಪುತ್ರರೊಡನೆ ಹೊರಗೆಯೇ ನಿಂತಿದ್ದ ಎಚ್ಚಮನಾಯಕನನ್ನು ಕೂಡಿಕೊಂಡನು.

ಅಂದೇ ರಾತ್ರಿ ರಾಜಪರಿವಾರವನ್ನು ಗುಪ್ತಮಾರ್ಗದಿಂದ ಸಾಗಿಸ ಬೇಕೆಂದು ಗೊತ್ತಾಗಿತ್ತಷ್ಟೆ. ಪರಿಸ್ಥಿತಿಯು ಎಲ್ಲ ರೀತಿಯಿಂದ ಅನುಕೂಲ ವಿತ್ತು. ಕಾವಲಿನವರು ಅಸ್ತವ್ಯಸ್ತರಾಗಿದ್ದರು ಸರದಾರ ಜನರಲ್ಲಿ ಔದಾ ಸೀನ್ಯವೂ ಹೊಯ್ದಾಟವೂ ತುಂಬಿದ್ದುವು. ಕೋಟೆಯ ಬಾಗಿಲುಗಳನ್ನು ತೆಗೆದಿಡುವದಕ್ಕಾಗಿ ಕಾವಲುಗಾರರಿಗೆ ಲಂಚವನ್ನು ಕೊಡಲಾಗಿದ್ದಿತು

ಆದರೆ ದೈವವೊಂದೇ ಇವರಿಗೆ ಅನುಕೂಲವಿದ್ದಿಲ್ಲ. ರಾತ್ರಿ ಖಾನನ ೫ ಜನರು, ನೆಲ ಮಾರ್ಗದಿಂದ ಸೆರೆಮನೆಯ ನೆಲವನ್ನು ಭೇದಿಸಿ ಒಳಗೆ ಬಂದಾಗ, ಚಿಕ್ಕರಾಯನು ಮೊದಲು ಗಾಬರಿಯಾದರೂ ಅವರು ತಂದಿದ್ದ ಎಚ್ಚಮನಾಯಕನ ಪತ್ರವನ್ನೋದಿ, ಇನ್ನು ತನ್ನ ಬಿಡುಗಡೆಯ ಸಮಯವು ಸನ್ನಿಹಿತವಾಯಿತೆಂದು ಹಿಗ್ಗಿದನು. ಪರಿಸರದಲ್ಲಿ ಪರಿವಾರವೆಲ್ಲ ಹೊರಡಲು ಸಿದ್ಧವಾಗಿ ಅರ್ಧ ದಾರಿ ಕ್ರಮಿಸಿರುವಷ್ಟರಲ್ಲಿ, ಜಗರಾಯನ ದಂಡಾಳುಗಳು ಬಂದು ಖಾನನ ಜನರನ್ನು ತುಂಡರಿಸಿ, ರಾಜಪರಿವಾರವನ್ನು ದೂಡಿಕೊಂಡು ಸೆರೆಮನೆಯೊಳಗೆ ಮತ್ತೆ ಕರೆತಂದರು ಜಗರಾಯನಿಗೆ ವಿಷಯವನ್ನು ನಿವೇದಿಸಿದರು. ಆದದ್ದಿಷ್ಟೆ, ಕಾವಲುಗಾರರು ಸ್ವಾಭಾವಿಕ ವಾಗಿ ರಾತ್ರಿ ಕೊಳ್ಳಿಗಳನ್ನು ಹಿಡಕೊಂಡು ತಿರುಗಾಡುತ್ತಿರುವಾಗ, ಒಬ್ಬನ ಕಾಲು ನೆಲದಲ್ಲಿ ಸಿಗಿಬಿದ್ದಿತು ! ಸಂಶಯ ಬಂದು ಅವರು ಅಗಿದು ನೋಡಲು ಮೇಲೆ ಹೇಳಿದ ನೆಲಮಾರ್ಗವು ಕಂಡು ಬಂದಿದ್ದಿತು. ತಮ್ಮ ಪ್ರಯತ್ನವು ವ್ಯರ್ಥವಾದದ್ದನ್ನು ಕಂಡು ಖಾನನಿಗೂ ಎಚ್ಚಮನಾಯಕನಿಗೂ ಹೇಳತೀರ ದಷ್ಟು ವ್ಯಥೆಯಾಯಿತು.

ಮೊದಲೇ ಅಸಮಾಧಾನದಿಂದ ಕುದಿಯುತ್ತಿದ್ದ ಜಗರಾಯನು ಈಗ ಸಿಟ್ಟಿನಿಂದ ಹುಚ್ಚಾದನು. ಇರುಗನಾಯಕನನ್ನು ಕರೆಯಿಸಿ ಚೆನ್ನಾಗಿ ಬುದ್ಧಿ ಹೇಳಿ. ಎಲ್ಲೆಡೆಗೂ ಬಿಗಿಯಾದ ಕಾವಲನ್ನು ಇರಿಸಿದನು. ಇದೆಲ್ಲ ಅನರ್ಥಕ್ಕೆ ಮೂಲ ಕಾರಣನಾದ ಚಿಕ್ಕರಾಯನನ್ನೂ ಅವನ ಪರಿವಾರವನ್ನೂ ಕೊಲೆ ಗೈಯಬೇಕೆಂದು, ಹಿಂದುಮುಂದೆ ವಿಚಾರಮಾಡದೇ ಈ ಕಾರ್ಯಕ್ಕೆ ತನ್ನ ತಮ್ಮನಾದ ಚಿನ್ನಓಬಲನನ್ನು ನಿಯಮಿಸಿದನು.

ಚಿನ್ನಓಬಲನು ಪ್ರತ್ಯಕ್ಷ ಯಮನೆಂದೇ ಹೇಳಬೇಕು. ಮರುದಿನ ಬೆಳಗಾದ ಮೇಲೆ, ಅವನು ತನ್ನ ಬಿಚ್ಚುಗತ್ತಿಯನ್ನು ಹೆಗಲಿಗೇರಿಸಿಕೊಂಡೇ ದುರ್ದೈವೀ ಚಿಕ್ಕರಾಯನಿರುವ ಸೆರೆಮನೆಯನ್ನು ಪ್ರವೇಶಿಸಿದನು.

ಆಗ ಚಿಕ್ಕರಾಯನು ತನ್ನ ದುರವಸ್ಥೆಯನ್ನು ಕುರಿತು ಚಿಂತಿಸುತ್ತ ಸೆರೆಮನೆಯಲ್ಲಿ ಒಂದು ಚಾಪೆಯ ಮೇಲೆ ಕುಳಿತುಕೊಂಡಿದ್ದನು. ಅರಸನಿಂದ ತುಸು ಅಂತರದ ಮೇಲೆ ರಾಣಿಯು ಕಸದಲ್ಲಿಯೆ ನೆಲದ ಮೇಲೆ ಕುಳಿತು, ಮೊಮ್ಮಗಳಾದ ನಾಗಲಾಂಬಿಕೆಯ ಆಟಪಾಟಗಳನ್ನು ನೋಡುತ್ತಲಿದ್ದಳು. ರಾಜನ ಹಿರಿಯ ಮಗನೂ ಅವನ ಹೆಂಡತಿಯೂ ಬೇರೊಂದು ಕೋಣೆಯಲ್ಲಿದ್ದರು. ನಾಗಲಾಂಬಿಕೆಯು ತನ್ನ ಮನೋಹರವಾದ ಹರಿದಾಟದಿಂದ, ಮುದ್ದು ಮಾತುಗಳಿಂದ, ಕ್ಷಣ ಕಾಲವಾದರೂ ಅವರೆಲ್ಲರ ಚಿಂತೆಯನ್ನು ದೂರಮಾಡಲಿಕ್ಕೆ ಸಮರ್ಥಳಾಗಿದ್ದಳು. ಕೂಸಿನ ಈ ಮನಮೋಹಕವಾದ ಹರಿದಾಟಕ್ಕೆ, ಅದರ ಕಾಲೊಳಗೆ ಒಂದಾದರೂ ಒಡವೆಯಿಲ್ಲವೆಂಬ ಅಲ್ಪವಾದ ದುಃಖವು ಹುಟ್ಟಲು, ಆ ಅಲ್ಪ ದುಃಖವೆ ದುರ್ದೈವದಿಂದ ಪರ್ವತಾಕಾರವನ್ನು ಧರಿಸಿ ನಿಂತಂತೆ, ಖಡ್ಗಪಾಣಿಯಾದ ಚಿನ್ನಓಬಲನು ಪ್ರತ್ಯಕ್ಷನಾದನು.

ಅವನನ್ನು ಕಂಡು ನಾಗಲಾಂಬಿಕೆಯು ಚಿಟ್ಟನೆ ಚೀರಿದಳು. ಹೌಹಾರಿದ ಆ ರಾಜಪರಿವಾರವನ್ನು ಕುರಿತು ಚಿನ್ನ ಓಬಲನು, "ಚಿಕ್ಕರಾಯಾ ನಿನ್ನನ್ನು ಸಹಕುಟುಂಬವಾಗಿ ಸಂಹರಿಸಬೇಕೆಂದು ರಾಜಾಜ್ಞೆಯಾಗಿದೆ. ಬೇಗನೆ ಆತ್ಮಹತ್ಯೆ ಮಾಡಿಕೋ. ಇಲ್ಲದಿದ್ದರೆ ನಾನೇ ಕೈಮುಟ್ಟಿ ನಿಮ್ಮೆಲ್ಲರನ್ನು ಸಂಹರಿಸಬೇಕಾಗುವದು" ಎಂದನು.

ಚಿಕ್ಕರಾಯನ ಎದೆಗೆ ವಜ್ರಾಘಾತವಾದಂತಾಯಿತು. ಆತನು ವಿನಯದಿಂದ, "ಓಬಲರಾಯಾ, ನನಗೆ ಈ ಅರಸೊತ್ತಿಗೆಯು ಸರ್ವಥಾ ಬೇಡವೆಂದು ಬೇಡಿಕೊಂಡೆ. ಆದರೂ ದೊರೆಗಳು ಕೇಳಲಿಲ್ಲ. ಮುಂದೂ ನನಗೆ ಅದರ ಮೇಲೆ ಆಸೆಯಿಲ್ಲ ಕಂಡೆಯಾ! ಹೇಗಾದರೂ ಮಾಡಿ ನಮಗೆ ಜೀವದಾನ ಮಾಡು" ಎಂದು ಅಂಗಲಾಚಿದನು. ಚಿನ್ನಓಬಲನು ಬಾಯಿಗೆ ಬಂದ ಹಾಗೆ ಅವನಿಗೆ ಬೈದನು. ಅದನ್ನು ಕಂಡು ಚಿಕ್ಕರಾಯನ ಮಗ ವೀರನರಸಿಂಗನು ಅವನಿಗೆ ಅಂಗಲಾಚುವದರಲ್ಲಿ ಅರ್ಥವಿಲ್ಲೆಂದು ತಂದೆಗೆ ಹೇಳಿ, "ದುಷ್ಟ

ಓಬಲನೇ, ನಿನ್ನನ್ನು ನಾವು ಚೆನ್ನಾಗಿ ಬಲ್ಲೆವು. ಬಾ, ಕೊಲ್ಲುವದಾದರೆ ಮೊದಲು ನೀನೇ ಕೊಲ್ಲು" ಎಂದು ಶಿರವನ್ನು ಬಾಗಿಸಿ ಅವನ ಮುಂದೆ ನಿಂತುಬಿಟ್ಟನು.

ಆಗ ಚಿಕ್ಕರಾಯನು. "ಮಗನೇ, ಪುತ್ರಶೋಕವನ್ನು ನನ್ನ ಕೊರಳಿಗೆ ಕಟ್ಟಬೇಡ. ತುಸು ತಡೆ" ಎಂದನು. ರಾಣಿಯು, "ನನಗೆ ವೈಧವ್ಯದ ಕಲಂಕವು ಹತ್ತದಂತೆ ಅನುಗ್ರಹಿಸಿರಿ;" ಎಂದು ಮೊಮ್ಮಗಳನ್ನು ಬಲವಂತದಿಂದ ಸೊಸೆಗೆ ಒಪ್ಪಿಸಿದಳು. ರಾಜಪರಿವಾರದ ಇನ್ನುಳಿದವರು ಗಳಗಳನೆ ಕಣ್ಣೀರು ಸುರಿಸತೊಡಗಿದರು. ಚಿನ್ನಓಬಲನಿಗೆ ಕರುಣೆ ಬರುವದಂತಿರಲಿ, ಅವನು ಅವಸರಪಡಿಸತೊಡಗಿದನು.

ರಾಣಿಯು ಹಣೆತುಂಬ ಕುಂಕುಮ ಹಚ್ಚಿಕೊಂಡು, ಸೆರಗನ್ನು ಅಡ್ಡಗಟ್ಟಿಕೊಂಡು, ರಾಜನ ಪಾದಗಳಿಗೆರಗಿ ಕುಳಿತಳು. ಚಿಕ್ಕರಾಯನು ಓಬಲನಿಂದ ಖಡ್ಗವನ್ನು ಇಸಿದುಕೊಂಡು, "ಹಾಯ್; ಚಿಕ್ಕರಾಯಾ, ಏನು ನಿನ್ನ ದುರ್ದೈವವಿದು; ಸುಖಪಟ್ಟೇನೆಂಬ ಆಶೆಯಿಂದ ಹುಟ್ಟಿದ ಮನೆಯನ್ನು ಬಿಟ್ಟು ತನುಮನಗಳಿಂದ ನಿನ್ನನ್ನು ಆಶ್ರಯಿಸಿರುವ ಈ ಸತೀಮಣಿಯನ್ನು ನಿನ್ನ ಕೈಯಿಂದಲೇ ಕೊಲೆಗೈವ ಹೊತ್ತು ಬಂದಿತೆ"? ಎಂದು ಹಲುಬಿದನು.

"ಸತಿಗೆ ಪತಿಯ ಚರಣಗಳು ಕಾಶಿಗಿಂತ ದೊಡ್ಡ ಕ್ಷೇತ್ರವಾಗಿರುವದರಿಂದ ಅಲ್ಲಿ ಪ್ರಾಣ ನೀಗುವ ನಾನೇ ಧನ್ಯಳು;" ಎಂದು ಸಾಧ್ವಿಯು ಉಚ್ಚರಿಸುತ್ತಿದ್ದಾಗ, ಒಂದೇ ಕಡಿತದಿಂದ ಚಿಕ್ಕರಾಯನು ಅವಳ ಶಿರಸ್ಸನ್ನು ಕೆಳಗುರುಳಿಸಿದನು.

ಹೆಂಡತಿಯ ರಕ್ತದಿಂದ ಸ್ನಾನ ಮಾಡಿದ ಚಿಕ್ಕರಾಯನು ಆವೇಶಗೊಂಡವನಾಗಿ ತನ್ನ ನಡುವಿನ ಮಗಳು, ಇನ್ನೊಬ್ಬ ಮಗ ಇವರನ್ನೂ ಎಳೆದು ತಂದು, ಆಹುತಿ ತೆಗೆದುಕೊಂಡನು. ಆಮೇಲೆ ತನ್ನ ಹಿರಿಯ ಮಗ ವೀರನರಸಿಂಗನ ಕೈಯಲ್ಲಿ ಖಡ್ಗವನ್ನು ಕೊಟ್ಟು ಸೊಸೆಯ ಸಂಹಾರವನ್ನು ನೋಡುತ್ತ ನಿಂತನು. ಅವಳ ರುಂಡವೂ ನೆಲಕ್ಕೆ ಬಿದ್ದ ಮೇಲೆ ಚಿಕ್ಕ ಬಾಲಿಕೆಯಾದ ನಾಗಲಾಂಬಿಕೆಯ ಮೇಲೆ ಶಸ್ತ್ರವನ್ನೆತ್ತುವದು ಆಗಲಿಲ್ಲ. ಆತನು ಕರಕರನೆ ಹಲ್ಲು ಕಡಿಯುತ್ತ "ದುಷ್ಟಾ: ಓಬಲಾ, ಈ ಹಸುಗೂಸನ್ನು ಮಾತ್ರ ಕ್ರೂರನಾದ ನಿನ್ನ ಪಾಲಿಗೆ

ಬಿಟ್ಟಿದ್ದೇನೆ. ಇನ್ನು ನಾನೂ ನನ್ನ ಮಗನೂ ಪ್ರಾಣ ಕೊಡುತ್ತೇವೆ" ಎಂದು ಇಬ್ಬರೂ ಸರದಿಯಂತೆ, ಉದ್ದವಾದ ಆ ಖಡ್ಗದ ಮೇಲೆ ಓಡಿ ಬಿದ್ದು ಪ್ರಾಣವನ್ನು ನೀಗಿದರು.

ರಕ್ತದಲ್ಲಿ ಮುಣುಗಿದ ಒಂದು ಕೂಸು ಮಾತ್ರ ಹೌಹಾರಿ ಅಳಲಿಕ್ಕೂ ಬಾಯಿಯಿಲ್ಲದೆ, ಆತಂಕ ಸ್ವರೂಪನಾದ ಓಬಲನೆದುರು ಕಣ್ಣು ಬಿಡುತ್ತ ಕುಳಿತಿದ್ದಿತು; ಓಬಲನು ಅದನ್ನು ಎಗ್ಗಿಲ್ಲದೆ ತುಂಡರಿಸಿ ಅರಸು ಮನೆತನದವರಾರೂ ಅಲ್ಲಿ ಉಳಿಯಲಿಲ್ಲವೆಂದು ಖಚಿತಪಡಿಸಿಕೊಂಡು ಹೊರಬಿದ್ದನು. ಈ ಅಂತಕನ ಕೋಲಾಹಲದ ಸುದ್ದಿಯು ಕ್ಷಣದಲ್ಲಿ ಹಬ್ಬಿತು.

ಈ ಭಯಂಕರ ಕೃತ್ಯವನ್ನು ಕೇಳಿ. ಎಷ್ಟೋ ಜನ ಸರದಾರರು ಜಗರಾಯನಿಗೆ ಬಾಯಿಗೆ ಬಂದ ಹಾಗೆ ಅಂದರು. ಮತ್ತು ಅನೇಕರು ಎಚ್ಚಮನಾಯಕನಿಗಾದ ದುಃಖವನ್ನು ವರ್ಣಿಸುವದು ಅಸಾಧ್ಯವೇ ಸರಿ. ತನ್ನ ಸ್ವಾಮಿಯನ್ನು ಏಕನಿಷ್ಠೆಯಿಂದ ಆರಾಧಿಸುವ ಸ್ವಾಮಿಭಕ್ತರು ಮಾತ್ರ ಅದನ್ನು ಯಥಾರ್ಥವಾಗಿ ಕಲ್ಪಿಸಬಹುದು. ಕೊಲೆಯ ಸುದ್ದಿಯನ್ನು ಕೇಳಿ, ಆ ಸ್ವಾಮಿನಿಷ್ಠನು ಜಡ ಮೂಢನಂತೆ ಒಂದೇ ಸಮನೆ ಕಣ್ಣೀರು ಸುರಿಸ ಹತ್ತಿದನು. ಆತನಿಗೆ ಅನ್ನ ನೀರುಗಳ ಪರಿವೆ ಇಲ್ಲದಂತಾಯಿತು. ಸ್ವೀಕೃತ ಕಾರ್ಯದ ಮೇಲಿನ ಆತನ ನಿಷ್ಠೆಯು ಸಮೂಲ ನಷ್ಟವಾದಂತಾಯಿತು. "ನಮ್ಮ ದೊರೆಗಳು ಭವಿಷ್ಯವನ್ನು ಅರಿತಿದ್ದರೋ ಅನ್ನುವಂತೆ ಪಟ್ಟವನ್ನು ಒಲ್ಲೆನಂತಲೇ ಅಂದರು. ಆದರೆ ನಾನೇ ದುರಭಿಮಾನಕ್ಕೆ ಒಳಗಾಗಿ, ಅವರ ಕೊರಳಿಗೆ ಅರಸೊತ್ತಿಗೆಯ ಉರುಲನ್ನು ಹಾಕಿದೆನಲ್ಲ. ನಾನೇ ಅವರನ್ನು ಕೊಂದೆನು" ಎಂದು ಒಬ್ಬನೇ ಮಾತನಾಡುತ್ತಿದ್ದನು.

ಎಂಟು ದಿನವಾಯಿತು; ತಿಂಗಳಾಯಿತು; ಆದರೂ ನಾಯಕನ ದುಃಖವು ಕಡಿಮೆಯಾಗಲಿಲ್ಲ. ದೇಶವು ಬಡವಾಯಿತು. ಆತನು ಜಗರಾಯನ ಅಹಿತವನ್ನೂ ಚಿಂತಿಸದಾದನು; ತನ್ನಲ್ಲಿದ್ದ ರಾಜಪುತ್ರನ ಹಿತವನ್ನೂ ಗಮನಿಸದಾದನು.

ಎಂದಿನಂತೆ ನಾಯಕನು ಹಾಸಿಗೆಯ ಮೇಲೆ ಒರಗಿದ್ದನು. ಒಂದು ಬದಿಗೆ ಕುಮುದಿನಿಯೂ ರಾಜಪುತ್ರನೂ ವಿಷಣ್ಣವದನರಾಗಿ ಕುಳಿತಿದ್ದರು.

ತುಸು ದೂರದ ಒಂದು ಆಸನದಲ್ಲಿ ಚಾಂದಖಾನನೂ, ಇತರ ಒಬ್ಬಿಬ್ಬ ಸರದಾರರೂ ಕುಳಿತಿದ್ದರು. ಆಗ ಹೊರಗೆ ಆವುಗೆಗಳ ಸ್ಪಷ್ಟ ಸಪ್ಪಳವು ಕೇಳಬರತೊಡಗಿತು. ಆಗ ತೇಜಃಪುಂಜ ಮೂರ್ತಿಯೊಂದು ನಾಯಕನು ಮಲಗಿದಲ್ಲಿಗೆ ಬಂದಿತು. ನಾಯಕನಿಗೆ ದರ್ಶನ ಮಾತ್ರದಿಂದ ಶಕ್ತಿ ಸಂಚಾರವುಂಟಾದಂತಾಗಿ ಚಟ್ಟನೆ ಎದ್ದು ನಿಂತನು.

ತನ್ನ ಗುರುವು ನೆನೆಸಿದಾಗ ಬರುವನೆಂಬ ವಿಶ್ವಾಸ ತಾಳಿದ್ದ ಕುಮುದಿನಿಯು ಆನಂದಾತಿಶಯದಿಂದ ತಲೆತಗ್ಗಿಸಿದಳು. ಎಲ್ಲರನ್ನೂ ಪ್ರತ್ಯಾದರಿಸಿ, ಕುಳಿತುಕೊಳ್ಳಲು ಸನ್ನೆ ಮಾಡಿ, ಆ ಋಷಿವರೇಣ್ಯನು ಹೇಳತೊಡಗಿದನು. "ನಾಯಕಾ, ಇದೇನು ನಿನ್ನ ರೀತಿಯು ? ಅವರವರ ಪ್ರಾರಬ್ಧ ಕರ್ಮಾನುಸಾರ ಒದಗುವ ಸಂಗತಿಗಳಿಗಾಗಿ ನಿನ್ನಂಥವರು ಹೀಗೆ ದೇಹವನ್ನು ವ್ಯರ್ಥವಾಗಿ ಸವೆಸುವದೆ ? ನಿನ್ನ ಅಕೃತ್ರಿಮ ರಾಜನಿಷ್ಠೆಯನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಈ ನಿನ್ನ ಪರಿತ್ಯಾಗದಲ್ಲಿ ಘಾತಕವಾದ ಚಿಂತೆಯು ಹೊರತು ಮತ್ತಾವ ಪುರುಷಾರ್ಥವಿದೆ ? ಅಕೃತ್ರಿಮ ಸ್ವಾಮಿನಿಷ್ಠೆಯು ಅಂತಿಮ ಫಲವು, ದುರ್ನಿವಾರವಾದ ಚಿಂತೆಯೇ ಏನು ? ಅಲ್ಲ ನಾಯಕಾ, ಸರ್ವಥಾ ಅಲ್ಲ; ನಿನ್ನ ಈ ತಪ್ಪನ್ನು ತಿಳಿಸುವುದಕ್ಕಾಗಿಯೆ ನಾನು ಇಲ್ಲಿಗೆ ಬಂದಿದ್ದೇನೆ, ಪರ್ಯಾಯದಿಂದ ನೀನು ನಿನ್ನ ಗತಿಸಿದ ಸ್ವಾಮಿಯು ಅಹಿತವನ್ನು ಮಾಡುತ್ತಿರುವೆಯೆನ್ನುವದನ್ನು ಮರೆಯಬೇಡ; ಚಿಂತೆಯನ್ನು ಕಳಚಿ ಕಾರ್ಯತತ್ಪರನಾಗು. ಕಂಡೆಯಾ ? ಚಿನ್ನ ವೆಂಕಟನ ಪಟ್ಟಾಭಿಷೇಕವನ್ನು ಈ ಕೈಗಳಿಂದ ಮಾಡಬೇಕೆಂದು ಬಂದಿರುವ ಈ ಬ್ರಾಹ್ಮಣನ ಅಪೇಕ್ಷೆಯನ್ನು ಉಪೇಕ್ಷಿಸಬೇಡ" ಎಂದೆನ್ನುತ್ತ ನಾಯಕನ ಬೆನ್ನಿನ ಮೇಲೆ ಕೈಯಾಡಿಸಿದರು. ಈ ಮಹಾಪುರುಷನ ಸ್ಪರ್ಶದಿಂದ ನಾಯಕನು ಚೈತನ್ಯಯುಕ್ತನಾದನು.

ಎಚ್ಚಮನಾಯಕನ ಹೃದ್ರೋಗದ ವರ್ತಮಾನವನ್ನು ಕೇಳಿ ಜಗರಾಯನು ಸಂತೋಷಪಟ್ಟಿದ್ದನು. ಈಗ ಎಚ್ಚಮನಾಯಕನ ಯುದ್ಧದ ಸಿದ್ಧತೆಯು ಒಂದೊಂದೇ ಸುದ್ದಿಗಳು ತಡವಿಲ್ಲದೆಯೆ ಬರತೊಡಗಿ ಆತನು ಕಂಗೆಟ್ಟನು. ವಿಜಯದಶಮಿಯು ದಿವಸ ತನ್ನ ೬೦ ಸಾವಿರ ಸೈನ್ಯದೊಡನೆ ಊರ ಹೊರಗೆ ಬೀಡುಬಿಟ್ಟನು.

ಇತ್ತ ಎಚ್ಚಮನಾಯಕನು ತನ್ನ ೨೦ ಸಾವಿರ ಸೈನ್ಯದಲ್ಲಿ ೩ ಭಾಗಗಳನ್ನು ಮಾಡಿದನು. ಕುಮುದಿನಿಯನ್ನೂ ೫ ಸಾವಿರ ಸೈನ್ಯವನ್ನೂ ರಾಜಪುತ್ರನ ರಕ್ಷಣೆಗೆಂದು ದುರ್ಗದಲ್ಲಿ ಬಿಟ್ಟನು. ಚಾಂದಖಾನನು ತನ್ನ ಹಾಗೂ ಐದು ಸಾವಿರ ಸೈನ್ಯದೊಡನೆ ಒಂದು ಮಗ್ಗುಲಿನಿಂದ ಜಗರಾಯನ ಸೈನ್ಯದ ಮೇಲೆ ಬೀಳಬೇಕೆಂದು ಗೊತ್ತು ಮಾಡಲಾಯಿತು.

ದ್ವಾದಶಿಯ ದಿವಸ ಯುದ್ಧವು ಆರಂಭವಾಯಿತು. ಜಗರಾಯನ ಸೈನ್ಯವು ದೊಡ್ಡದಿದ್ದುದರಿಂದ ಮೊದಮೊದಲು ಅದರ ಹೊಡೆತಕ್ಕೆ ಎಚ್ಚಮನಾಯಕನ ಸೈನ್ಯವು ತತ್ತರಿಸಿತು. ಆದರೆ ಎಚ್ಚಮನಾಯಕನು ಅತ್ಯಂತ ಆವೇಶದಿಂದ ಯುದ್ದ ಮಾಡತೊಡಗಲು ಅವನ ಸೈನಿಕರಿಗೆ ದ್ವಿಗುಣಿತ ಉತ್ಸಾಹ ಉಕ್ಕಿ ಬಂದಿತು.

ಇಳಿ ಹೊತ್ತಿನ ಸಮಯಕ್ಕೆ ಚಾಂದಖಾನನ ದಂಡಾಳುಗಳು "ದೀನ ದೀನ" ಎಂದು ಶಬ್ದ ಮಾಡುತ್ತ ಜಗರಾಯನ ದಂಡಿನ ಮೇಲೆ ಬೀಳುತ್ತಲೂ ಅವರು ಎದೆಗುಂದಿದರು. ತಾಳೀಕೋಟೆಯ ಕಾಳಗದಿಂದ ಮುಸಲ್ಮಾನರ ಅಂಜಿಕೆಯು ಹಿಂದೂ ಜನರ ಹೃದಯದಲ್ಲಿ ಮನೆಮಾಡಿಕೊಂಡಿತ್ತು. ಚಾಂದಖಾನನ ಶಿಸ್ತಿನ ಯುದ್ಧದಿಂದ ಜಗರಾಯನ ದಂಡಿನವರು ಹತವೀರ್ಯರಾದರು. ಅವರು ಓಡತೊಡಗಿದರು. ಜಗರಾಯನು ಅವರನ್ನು ಹಿಂತಿರುಗಿಸಲಿಕ್ಕೆ ಮಾಡಿದ ಪ್ರಯತ್ನವು ವ್ಯರ್ಥವಾಯಿತು.

ಚಾಂದಖಾನನು ಜಗರಾಯನಿಗೆ ಚಂದ್ರಗಿರಿಯ ಕಡೆಗೆ ಹೋಗಲಿಕ್ಕೆ ಆಸ್ಪದ ಕೊಡದ್ದರಿಂದ ಅವನು ತನ್ನ ಮೊಮ್ಮಗನನ್ನು ಕಟ್ಟಿಕೊಂಡು ಅಡವಿಯನ್ನು ಸೇರಿದನು. ಅವನ ರಾಜಚಿಹ್ನಗಳನ್ನೂ ಜಗರಾಯನ ಇತರ ಸಾಮಗ್ರಿಗಳನ್ನೂ ಎಚ್ಚಮನಾಯಕನು ವಶಪಡಿಸಿಕೊಂಡು ವಿಜಯೋತ್ಸಾಹದಿಂದ ದುರ್ಗವನ್ನು ಸೇರಿ ಋಷೀಶ್ವರನಿಗೂ ರಾಜಪುತ್ರನಿಗೂ ವಂದಿಸಿದನು.

ಆ ಮೇಲೆ ರಾಜಪುತ್ರನನ್ನು ಮುಂದಿಟ್ಟುಕೊಂಡು ಅವರು ಚಂದ್ರಗಿರಿಯತ್ತ ಸಾಗಿಬರಲು ಚಂದ್ರಗಿರಿಯಲ್ಲಿಯ ಸೈನಿಕರೂ, ಜನರೂ ತಡವಿಲ್ಲದೆಯೇ ಶರಣುಬಂದರು. ಮರುದಿನ ಉಷಃಕಾಲಕ್ಕೆ ರಾಜಧಾನಿಯನ್ನು ಪ್ರವೇಶಿಸಬೇಕೆಂದು ಋಷೀಶ್ವರನ ಅಪ್ಪಣೆಯಾಗಿತ್ತು. ಪಟ್ಟಣವನ್ನು ಶೃಂಗರಿಸುವ

ಕೆಲಸವು ಒತ್ತರದಿಂದ ಸಾಗಿತು. ಚಿಕ್ಕರಾಯರ ಕುಟುಂಬದ ಕೊಲೆಯಿಂದ ದುಃಖಿತರಾಗಿದ್ದ ಜನರು, ಚಿಕ್ಕರಾಯರ ಮಗನೇ ಜಯಶಾಲಿಯಾಗಿ ಪಟ್ಟಣ ವನ್ನು ಪ್ರವೇಶಿಸುವನೆಂಬ ಆನಂದದಿಂದ ತಂತಮ್ಮ ಮನೆಗಳನ್ನು ಆಸ್ಥೆಯಿಂದ ಶೃಂಗರಿಸತೊಡಗಿದರು.

ಕುಮುದಿನಿಯು ರಾಜಪುತ್ರನಿಗೆ ದರ್ಬಾರದ ಸುಂದರವಾದ ಪೋಷಾ ಕನ್ನು ಹಾಕಿ, ಆತನನ್ನು, ರಾಜಚಿಹ್ನಗಳಿಂದ ಕೈಮುಟ್ಟಿ ಅಲಂಕರಿಸಿದಳು. ಮಂಗಲ ವಾದ್ಯಗಳು ಭೋರ್ಗರೆಯುತ್ತಲೂ ಸೈನಿಕರು ಹಿಂದು ಮುಂದೆ ಇದ್ದುಕೊಂಡು ಪಲ್ಲಕ್ಕಿಯನ್ನೇರಿದ ಮಹಾತ್ಮರೂ. ಸಿಂಗರಿಸಿದ ಆನೆಯ ಅಂಬಾರಿಯ ಮೇಲೆ ಕುಮುದಿನಿಯೊಡನೆ ಕುಳಿತ ರಾಜಪುತ್ರನೂ ಶೌರ್ಯಕ್ಕೆ ಒಪ್ಪುವ ರೀತಿಯಿಂದ, ಅಶ್ವಾರೂಢರಾಗಿದ್ದ ಎಚ್ಚಮನಾಯಕ, ಚಾಂದ ಖಾನರೂ ಇತರ ಸರದಾರರೂ ಅತ್ಯಂತ ವೈಭವದಿಂದ ಪುರಪ್ರವೇಶ ಮಾಡಿದರು.

ಸುಮಂಗಲೆಯರು ಆರತಿಯನ್ನು ಬೆಳಗಿದ ಮೇಲೆ ರಾಜಪುತ್ರನು ದಿವಾಣಖಾನೆಯನ್ನು ಪ್ರವೇಶಿಸಿದನು. ಋಷೀಶ್ವರನೇ ಹಸ್ತಲಾಘವವನ್ನು ಕೊಟ್ಟು ರಾಜಪುತ್ರನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುವಾಗ ಆತನ ತಂದೆಯ ಸೌಜನ್ಯವನ್ನು ನೆನೆದು ಎಲ್ಲರ ಕಣ್ಣುಗಳು ಒದ್ದೆಯಾದುವು; ಆ ಮಹಾಪುರುಷನೇ ಕೈಮುಟ್ಟಿ ಅಭಿಷೇಕದ ವಿಧಿಯನ್ನು ಮುಗಿಸಿದನು; ಸಾಂಪ್ರ ದಾಯದಿಂದ ಆಗಬೇಕಾಗಿದ್ದ ಎಲ್ಲ ವಿಧಿಗಳು ಸಾಂಗವಾಗಿ ಸಾಗಿದ್ದಾಗ ಎಚ್ಚಮನಾಯಕ ಹಾಗೂ ಕುಮುದಿನಿಯರ ಕಣ್ಣುಗಳೊಳಗಿಂದ ಆನಂದ ಬಾಷ್ಪಗಳು ಹರಿದುವು.

ಆಗ ಋಷೀಶ್ವರನು ಕುಮುದಿನಿಯನ್ನು ಬಳಿಗೆ ಕರೆದು "ಅಮ್ಮಾ; ಕುಮುದಿನೀ, ಎಲ್ಲ ದೃಷ್ಟಿಯಿಂದ ನಿನಗೆ ಅನುರೂಪನಾದ ಎಚ್ಚಮನಾಯಕನ ಕೊರಳಲ್ಲಿ ಮಾಲೆ ಹಾಕು ಬಾ" ಎಂದು ಹಾರವನ್ನು ಅವಳ ಕೈಗಿತ್ತನು. ಆಕೆಯು ಆನಂದಾತಿಶಯದಿಂದ ಕಂಪಿಸುತ್ತ, ಋಷೀಶ್ವರನ ಚರಣಕ್ಕೆ ವಂದಿಸಿ, ಸರ್ವರ ಸಮಕ್ಷಮ ನಾಯಕನ ಕೊರಳಲ್ಲಿ ಮಾಲೆ ಹಾಕಿದಳು.

# ಬನಗರವಾಡಿ

ಇದೊಂದು ಹಿಂದುಳಿದ ಜನರ ಕಾಡು ಜೀವನದೊಂದಿಗೆ ಬೆರೆತು ಆ ಹಳ್ಳಿಯನ್ನೂ, ಜನರನ್ನೂ ಸುಧಾರಿಸಿದ ಒಬ್ಬ ಆದರ್ಶ ಶಿಕ್ಷಕನ ಕಥೆ—ಉತ್ತಮ ಜೀವನಕ್ಕೆ ಉತ್ತಮ ಉದಾಹರಣೆಯಾಗಿರುವ ಈ ಮರಾಟಿ ಕಾದಂಬರಿ ಸಮಸ್ತ ಭಾರತೀಯ ಗ್ರಾಮ-ಗಿರಿ-ಜೀವನದ ಚಿತ್ರಣಕ್ಕಾಗಿ ಪ್ರಸಿದ್ಧವಾಗಿದೆ. ಗ. ದಿ. ಮಾತಗೂಳಕರ ಅವರ ಖ್ಯಾತ ಮರಾಟಿ ಕಾದಂಬರಿಯ ಸಂಕ್ಷಿಪ್ತ ರೂಪ ಇದು.

ಬಿಸಿಲಿನ ಝಳದಿಂದ ದಾರಿಯೆಲ್ಲಾ ರಣರಣ ಎನ್ನುತ್ತಿತ್ತು. ಅಂಥದ ರಲ್ಲಿಯೆ ಚಿಕ್ಕ ನೊಣಗಳ ಗುಂಪೊಂದು ನನ್ನ ಮುಖದ ಸುತ್ತಲೂ ನರ್ತಿಸುತ್ತ ಸಾಗಿದ್ದಿತು. ಈಗ ಹೋದಾವು ಎಂದು ನಾನೂ ಟೊಪ್ಪಿಗೆಯಿಂದ ಝಾಡಿಸಿ ನೋಡಿಯೆ ನೋಡಿದೆ. ಆದರೂ ನನ್ನನ್ನು ಅವು ಬಿಟ್ಟುಹೋಗುವಂತೆ ಕಾಣಲಿಲ್ಲ. "ಈತ ಎಲ್ಲೊ ಮನುಷ್ಯರ ವಸತಿಯತ್ತ ಹೊರಟಂತೆ ತೋರು ತ್ತದೆ. ಇವನ ಜೊತೆಗೆ ಹೋದರೆ, ಹೊಲಸು, ತಿಪ್ಪಿ ಇರುವ ಜಾಗ ನಮಗೆ ಖಂಡಿತ ಸಿಕ್ಕೀತು" ಎಂದು ಆ ಕೀಟಸಮೂಹಕ್ಕೆ ಅನಿಸಿರಬೇಕು.

ದಾರಿಯ ಎಡಬಲದಲ್ಲಿ ಸೆಜ್ಜೆಯ ಕೆಂಪು ಹೊಲಗಳು, ಅಲ್ಲಲ್ಲಿ ಖಾಲಿ ಬಯಲುಗಳು, ಸ್ವಲ್ಪ ದೂರದಲ್ಲಿಯೆ ಆ ಬನಗರವಾಡಿ. ಅಸ್ತವ್ಯಸ್ತವಾಗಿ ಬಿದ್ದ ಸರಕುಗಳಂತೆ, ಅಲ್ಲಿ ೩೦-೩೫ ಮನೆಗಳು ಕಂಡವು. ಮನೆಗಳೆಲ್ಲ ಹೆಚ್ಚಾಗಿ ಮಣ್ಣಿನ ಮಾಡುಗಳುಳ್ಳವು. ಕೆಲವು ಈಚಲು ಮರದ ಗರಿಯ ಚಪ್ಪರವನ್ನು ಹೊತ್ತಿದ್ದವು. ಊರೊಳಗೆ ಬಂದೆ. ಮುಸೀರೆ ನೀರಿನಿಂದ ಬೆಳೆದ ಬೇವಿನ ಹಾಗೂ ನುಗ್ಗಿಯ ಗಿಡಗಳೂ ಅಲ್ಲಲ್ಲಿ ಕಂಡವು. ಆ ಹಳ್ಳಿ ಯಲ್ಲಿ ರಸ್ತೆ ಎಂಬುದು ಪ್ರತ್ಯೇಕವಾಗಿ ಇರಲೇ ಇಲ್ಲ. ಮನೆಗಳಿಲ್ಲದ ಜಾಗವೇ ರಸ್ತೆಯಾಗಿ ಉಪಯೋಗಿಸಲ್ಪಡುತ್ತಿತ್ತು.

ಆ ರಣಗುಡುವ ಬಿಸಿಲಿನ ಸಮಯದಲ್ಲಿ ಮನೆ ಬಾಗಿಲುಗಳೆಲ್ಲ ಇಕ್ಕಿದ್ದವು. ಅತ್ತ ಒಂದು ನಾಯಿ, ಎಲ್ಲೊ ಒಂದೆರಡು ಕೋಳಿಗಳು ಕಣ್ಣಿ

ಮುಚ್ಚಿ ಸುಮ್ಮನೆ ಕುಳಿತಿದ್ದುವು. ಒಂದು ಮನೆಯ ಮುಂದುಗಡೆ ಆಡುತ್ತಿದ್ದ ಮಕ್ಕಳು ನನ್ನನ್ನು ನೋಡಿದೊಡನೆ ಓಡಿಹೋದುವು. ಕೆಲವು ಹೆಂಗಸರು ಹೊರಗೆ ಹಣಿಕಿಹಾಕಿದಂತೆ ಮಾಡಿ, ಪುನಹ ಬಾಗಿಲಿಕ್ಕಿಕೊಂಡರು.

ಸ್ವಲ್ಪ ಮುಂದೆ ಹೆಜ್ಜೆಹಾಕಿದಾಗ, ಅಲ್ಲೊಂದು ಬೇವಿನ ಕಟ್ಟೆ ಕಂಡಿತು. ಆ ತಣ್ಣಗಿನ ತಾಣ ನೋಡಿದವನೆ ನಾನು ಅಲ್ಲಿಗೆ ಹೋದೆ. ಕಾಲು ಇಳಿಬಿಟ್ಟು ಕುಳಿತು ಧೂಳು ಕೆಡವಿಕೊಂಡೆ, ಬೆವರು ಒರೆಸಿಕೊಂಡೆ, ಇದ್ದುದರಲ್ಲೇ ಸ್ವಲ್ಪ ಹಾಯೆನಿಸಿತು. ಮರುಕ್ಷಣವೆ ಹಸಿವೆಯು ತಳಮಳ ಮೇಲೆದ್ದಿತು. ಅದಕ್ಕಿಂತ ಮುಂದಾಗಿ ಬಾಯಾರಿಕೆಯು ಬಾಧೆ ಸುರುವಾಯಿತು. ರೊಟ್ಟಿಯು ಗಂಟೇನೋ ಇದ್ದಿತು. ಆದರೆ ನೀರು ಬೇಕಲ್ಲ.

ಇದೇ ದಾರಿಯಿಂದ ಸದ್ಯ ಒಬ್ಬ ಬರುತ್ತಿದ್ದಾನೆ, ಅವನನ್ನೆ ಕೇಳೋಣ ಎಂದು ಕಾಯ್ದೆ. ಅಬ್ಬಾ, ಆ ಮನುಷ್ಯ ಎಷ್ಟು ಒರಟು! ಅವನ ದಟ್ಟ ಮೀಸೆಯು ಗಡಸು ಮುಖ; ಕೆಂಪಡರಿದ ಕಣ್ಣುಗಳು: ಆ ದಪ್ಪ ಮುಂಡಾಸು! ಕೈಯಲ್ಲಿ ಮಾರುದ್ದದ ಭಾಲೆಯ (ಬರ್ಚಿಯು) ಕೋಲು ಬೇರೆ. ಇದೆಲ್ಲ ನೋಡಿ, ನೀರಿಗಾಗಿ ಅವನನ್ನು ಕೇಳದಿರುವುದೇ ವಾಸಿಯೆಂದು ಕಂಡಿತು. ಆತ ನನ್ನನ್ನು ಒಮ್ಮೆ ಅಡಿಯಿಂದ ಮುಡಿವರೆಗೆ ನೋಡಿ, ತನ್ನ ಮೀಸೆಯು ಮೇಲೆ ಕೈ ಎಳೆದು 'ಪಿಚಕ್' ಎಂದು ಉಗುಳಿದಾಗ ನನ್ನ ಮೇಲೇ ಉಗುಳಿ ದಂತೆ ಭಾಸವಾಯಿತು.

ಬೆದರಿಕೆ ಹಾಕುವಂತೆ ಒಳ್ಳೇ ತಾರಸ್ವರದಲ್ಲಿ ಅವನು "ತತ್ತೀ ಮಾರಾಕ ಬಂದೀ?" ಎಂದು ಕೇಳಿದನು.

ತತ್ತಿ! ನನ್ನ ಕುಳ್ಳ ಆಕೃತಿ, ತೊಟ್ಟ ಪಾಯಿಜಾಮಾ, ಬಳಿಯಲ್ಲಿದ್ದ ಚಿಕ್ಕ ಗಂಟು ಇವುಗಳಿಂದ ನಾನು ಊರೂರು ತಿರುಗಿ ತತ್ತಿ ಮಾರುವ ಸಾಬಿಯು ಹಾಗೆ ಅವನಿಗೆ ಕಂಡೆನಲ್ಲಾ ಎಂದು ಒಂದಿಷ್ಟು ವ್ಯಥೆಯಾಯಿತು; ನನ್ನ ಟೊಪ್ಪಿಗೆಯನ್ನು ಸರಿಮಾಡಿಕೊಂಡು, "ಇಲ್ಲ, ನಾನು ಇಲ್ಲಿಗೆ ಮಾಸ್ತರಾ ಅಂತ ಬಂದೀನಿ" ಎಂದೆ.

"ಮಾಸ್ತರಾ? ಹಂ. ಇಲ್ಲಿಯಾನ ಮಾಡೂದ್ಯೆತಿ ಮಾಸ್ತರನ ಕೆಲಸಾ? ಸಾಲಿ ನಡಸಲಾಕ ಪೋರಗಳು [ಹುಡುಗರು] ಇದ್ರ ಅಲ್ಲs? ಸರಕಾರಕ

ಇಲ್ಲದ್ದೊಂದು ಫಾಜಿಲತನ" ಎಂದವನೇ ಇನ್ನೊಮ್ಮೆ ಪಿಚಕ್ ಎಂದು ಉಗುಳಿದನು. ತಿರುಗಿ ಕೂಡಾ ನೋಡದೇ ಹೊರಟುಹೋದನು.

ನೀರಿಗಾಗಿ ಅವನನ್ನು ನಾನು ಕೇಳುವುದಿರಲಿ, ಆ ಊರಿಗೆ ಬರುವಾಗ ಇದ್ದ ನನ್ನ ಉತ್ಸಾಹವೆಲ್ಲ ಇಂಗಿಹೋಯಿತು "ಈ ಕೆಟ್ಟ ಹಳ್ಳಿಯಲ್ಲಿ ನಾನು ಜೀವಿಸುವುದೇ ಸಾಧ್ಯವಿಲ್ಲ. ಇಲ್ಲಿ ಶಾಲೆ ನಡೆಯುವುದಿಲ್ಲ. ಇಲ್ಲಿಯ ಮಕ್ಕಳನ್ನು ನಾನು ನಿಭಾಯಿಸುವುದು ಶಕ್ಯವಿಲ್ಲ. ಈಗಲೇ ಹಿಂತಿರುಗಿ ರಾಜೀನಾಮೆ ಬರೆದು ಕೊಡುವೆ" ಎಂದು ಚಿಂತಿಸುತ್ತಲಿದ್ದೆ.

ಅಷ್ಟರಲ್ಲಿ ಒಬ್ಬ ಹಣ್ಣು ಮೀಸೆಯ ಮುದುಕನು ಕೋಲನ್ನು ಹಿಡಿದು ಕೊಂಡು ಇತ್ತ ಕಡೆಗೇ ಬಂದು ನನ್ನೆದುರು ನಿಂತನು. ಕಳೆದುಕೊಂಡ ಕುರಿಯು ಸಿಕ್ಕಾಗ ಅದರ ಗುರುತು ಹಚ್ಚಿ ಪರಿಶೀಲಿಸುವವರಂತೆ ನನ್ನನ್ನು ನೋಡುತ್ತ—

"ಇಲ್ಯಾಕ ಕುಂತೀಯಲಾ, ತಮ್ಮಾ" ಎಂದ.

"ನಾನು ಮಾಸ್ತರ ಇದ್ದೀನಿ. ಈ ಊರಿನ ಶಾಲೆಗೆ ನನ್ನ ನೇಮಿಸಿ ದ್ದಾರೆ" ಎಂದೆ.

"ಎಲಾ ! ಮತ್ತ ಮಾಸ್ತರ ಆಗಿದ್ರ ಇಲ್ಯಾಕ ಕುಂದರತೀಯೋ ? ಸಾಲ್ಯಾಗ ಕುಂದರು." ಮುದುಕನ ಈ ಮಾತಿನಿಂದ ನನಗೆ ಧೈರ್ಯ ಬಂತು. ಶಾಲೆ ಎಲ್ಲಿದೆಯೆಂಬುದು ಗೊತ್ತಿಲ್ಲವೆಂದು ನುಡಿದೆ.

"ಅಕೊ, ಆ ಚಾವಡಿ ಐತಲ್ಲಾ, ಅಲ್ಲೇ ಸಾಲಿ ಐತಿ. ಅದರಾಗಿನ ಯಾಡ್ (ಎರಡು) ಅಂಕಣ ಜಾಗಾ ಸಾಲಿಗೆ ಅಂತ ಐತಿ. ಹೋಗಿ ಅಲ್ಲಿ ಕುಂದರು" ಎಂದು ಅವನು ಚಾವಡಿಯತ್ತ ತನ್ನ ಕೋಲನ್ನು ತೋರಿಸಿದನು.

"ಒಬ್ಬನೇ ಅಲ್ಲಿ ಕುಳಿತು ಏನು ಮಾಡಲಿ ? ಹುಡುಗರೆಲ್ಲಿ ಅವೆ ?" ಎಂದು ಅವನನ್ನು ಕೇಳಿದೆ.

"ಹುಡುಗೂರೆಲ್ಲಾ ಕುರಿ ಕಾಯಲಾಕ ಹೋಗ್ಯಾವು. ಬಂದಾರು, ಅವರೇನ ಅಲ್ಲೇ ಅಡವ್ಯಾಗ ಕುಂದರತಾರೇನು ?"

"ಆದರೆ ಶಾಲೆ ನಡೆಸುವಷ್ಟು ಮಕ್ಕಳು ಇವೆಯೆ ?"

"ಇದ್ದಾವು. ಮತ್ತs ಆಗೂತಾವು. ದರಾ ವರಸಾ ಹತ್ತಿಪ್ಪತ್ತು ಮಂದವಿ ಆಗತಾವು- ಪೋರಗೋಳು ಆಗದs ಇರತಾವೇನ ? ನೀ ಕಲಸೋ ಕೆಲಸಾ ಆಟs ಮಾಡು." ಮುಂದಾಳುಕನ ಈ ಮಾತು ಕೇಳಿ ನನಗೆ ನಗೆಬಂದಿತು.

ನಾನು ಶಾಲೆಯತ್ತ ಹೊರಡುತ್ತ "ಇಲ್ಲಿ ನೀರು ಎಲ್ಲಿ ಸಿಗುತ್ತದೆ ? ರೊಟ್ಟಿ ತಂದೇನಿ. ನೀರಡಿಕೇನೂ ಆಗೇದ" ಎಂದೆ.

"ನೀರಿನದೇ ಗೋಳಪ್ಪಾ ಈ ಹಟ್ಟಿಯೊಳಗ. ನಮ್ಮ ಕುರುಬರ ನೀರು ನಿನಗ ನಡೀತಿದ್ರ ಬೇಕಾರ ಕೊಡತೇನಿ" ಎಂದ ಅವನ ಮಾತಿಗೆ "ನಡೀದೇ ಏನು" ಎಂದು ನಾನು ಸಮ್ಮತಿಸಿದೆ.

"ಏ ಅಂಜೀ, ನೀರಿನ ಚೆರಗಿ ತುಂಬಿ ತಾ, ಮಾಸ್ತರಗ" ಎಂದು ನಿಂತಲ್ಲಿಂದಲೇ ಕೂಗಿ ಹೇಳಿದನು.

ಅನಂತರ ಅವನ ಜೊತೆಗೆ ಹೋಗಿ ಶಾಲೆಯ ಬಾಗಿಲಿನ ಬೀಗ ತೆಗೆದೆ. ಒಳಗೆ ನೋಡಿದರೆ, ಗುಬ್ಬಿಗಳ ಹೇಸಿಕೆ ಮತ್ತು ಧೂಳಿನಿಂದ ಆ ಜಾಗ ನಾರುತ್ತಿತ್ತು. ಅಲ್ಲಲ್ಲಿ ಗುಬ್ಬಚ್ಚಿಗಳು ಗೂಡು ಕಟ್ಟಿದ್ದವು. ಆ ಗೂಡುಗಳೊಳಗಿಂದ ದಾರ, ಬಟ್ಟೆಯ ತುಂಡು, ಹುಲ್ಲಿನ ತುಣುಕುಗಳು ಜೋತಾಡುತ್ತಿದ್ದವು. ನೆಲವಂತೂ ತಗ್ಗು-ದಿನ್ನೆಯಾಗಿ, ಹುಡಿ ಮಣ್ಣು ಹರಡಿದ್ದಿತು. ಮುಂದಾಳುಕನು ತನ್ನ ಕಂಬಳಿಯಿಂದ ಜಾಗವನ್ನು ಸ್ವಚ್ಛ ಮಾಡುವವನಂತೆ ಕೊಡವಿ, ಕಂಬಳಿಯನ್ನು ಹಾಸಿದನು. ನನಗೆ ಕೂಡ್ರಲು ಹೇಳಿ ತಾನೂ ಅಲ್ಲಿಯೇ ಕುಳಿತನು.

"ಹೂಂ, ಬಿಚ್ಚಪ್ಪಾ ಇನ್ನ ರೊಟ್ಟೀ ಗಂಟು. ಈಗ ನೀರು ತರತಾಳು ಪೋರಿ" ಎಂದನು.

"ನೀವೂ ನನ್ನ ಸಂಗತೀ ತಗೊಳ್ಳಿರಾ" ಎಂದು ನಾನು ಕೇಳಿದೆ.

"ನಾವು ಈಟೊತ್ತು ಹಂಗೇ ಕುಂಡರತೇವೇನೆಲಾ. ಈಗ ಯಾಡ ಬಾರೇ ಆತು ನಮ್ಮದು. ನೀ ತಿನ್ನು" ಎಂದು ನಗುತ್ತ ಹೇಳಿದ. ಅಷ್ಟರಲ್ಲಿ ಒಬ್ಬ ಕಪ್ಪನೆಯ ಹುಡುಗಿ ಶಾಲೆಯ ಕೋಣೆಯ ಹೊರಗೇ ನಿಂತು ನೀರಿನ

ತಂಬಿಗೆಯನ್ನು ಹೊಸ್ತಿಲ ಒಳಗೆ ಇಟ್ಟು ಒಂದು ನಿಮಿಷ ನನ್ನನ್ನು ನೋಡಿದವಳೇ ಹೋಗಿಬಿಟ್ಟಳು. ಇತ್ತ ನಾನು ಮುದುಕನತ್ತ ನೋಡುತ್ತ, ತುಸು ಸಂಕೋಚದಿಂದಲೇ ರೊಟ್ಟಿ ತಿನ್ನತೊಡಗಿದೆ. ಅವನ ಮೈಮೇಲೆ ಮೊಳಕಾಲಿನವರೆಗಿನ ಧೋತರ, ತಲೆಗೆ ಒಂದು ರುಮಾಲು ಇಷ್ಟು ಬಿಟ್ಟರೆ ಇನ್ನೇನೂ ಇರಲಿಲ್ಲ. ಕುರಿಗಳಂತೆಯೇ ಅವನ ಮೈಬಣ್ಣವು ಬಲು ಕಪ್ಪು. ಆದರೆ ಅವನ ಗಿಡ್ಡದಾದ ಗಡ್ಡ, ತೆಳ್ಳಗಿನ ತಲೆಗೂದಲು ಮತ್ತು ಅವನ ಹುಬ್ಬು ಸಹಿತ ಬಿಳಿಯಾಗಿದ್ದುವು. ಅವನು ತನ್ನ ಚಂಚಿಯನ್ನು ಬಿಚ್ಚಿ ತಂಬಾಕನ್ನು ಹಾಕಿಕೊಂಡು, "ಯಾವೂರಪಾ ನಿಂದು ?" ಎಂದು ಕೇಳಿದನು.

"ನಮ್ಮೂರು ವಿಭೂತಿವಾಡಿ, ಇಲ್ಲೇ ಇದೆ" ಎಂದೆ.

ಮುಂದುವರಿಯುತ್ತ ನನ್ನ ಬಳಗದವರ ಹೆಸರು, ದೆಸೆ ಹೇಳಿದ ಮೇಲೆ, ಮುದುಕನು ಅವರಿವರ ಗುರುತು ಹಿಡಿಯುತ್ತ "ಹಾಂಗಾರ ನೀ ನಮ್ಮ ಪೈಕಿ ಹುಡುಗನೇ ! ಏನಡ್ಡಿಯಿಲ್ಲ" ಎಂದು ನನ್ನ ಬೆನ್ನು ಚಪ್ಪರಿಸಿದನು. ಆ ಉತ್ತೇಜನದಿಂದ ನನ್ನ ಮನಸ್ಸಿನ ಒಂಟಿತನ, ಬೇಸರಗಳು ಹೊರಟು ಹೋದವು. ತುಸು ಹೊತ್ತಿನ ನಂತರ ಮುದುಕನು ಎದ್ದುಹೋಗುತ್ತಲೂ ನಾನೊಬ್ಬನೇ ಶಾಲೆಯಲ್ಲಿ ಉಳಿದೆ.

ಶಾಲೆಯ ಗೋಡೆಯ ಮೇಲೆ ಹಿಂದಿನ ಮಾಸ್ತರರು ಅನೇಕ ಗಾದೆ ಮಾತುಗಳನ್ನು ಬರೆದಿದ್ದರು ಪೂರ್ವ–ಪಶ್ಚಿಮ ದಿಕ್ಕುಗಳಿಗೆ ಆಯಾ ಹೆಸರಿನ ಬೋರ್ಡುಗಳನ್ನು ತೂಗುಹಾಕಿದ್ದರು. ಹಿಂದಿನ ಗೋಡೆಗೆ ತಾಗಿ ಒಂದು ಮೇಜು, ಕುರ್ಚಿ, ಒಂದು ಕರಿ ಹಲಿಗೆ ಇದ್ದವು. ಮೇಜಿನ ಮೇಲೆ, ಒಂದು ಹಲಗೆ ಒರೆಸುವ ಬಟ್ಟೆ, ರೂಲು ಕಟ್ಟಿಗೆ, ಒಂದು ಹಳೆಯ ರಜಿಸ್ಟರ್, ಹಾಜರಿ ಪುಸ್ತಕ, ಟಾಕು, ದೌತಿ ಮತ್ತೇನೇನೋ ಇದ್ದುವು.

ನನಗೆ ನಿದ್ದೆ ಬರತೊಡಗಿತು. ಗುಬ್ಬಿಗಳ ಕಿರಿಚಾಟ ಒಂದೆಡೆ, ಇನ್ನೊಂದೆಡೆ ನೊರಜುಗಳ ಕಾಟ. ಅಂಥದರಲ್ಲೇ ಮುಸುಕೆಳೆದುಕೊಂಡು ಮಲಗಿದೆ.

ಎಚ್ಚರವಾದಾಗ ಸಂಜೆಯಾಗಿಬಿಟ್ಟಿದ್ದಿತು. ಕಾಲುಗಳು ನೋಯುತ್ತಿದ್ದುದರಿಂದ, ಏಳದೆ ಹಾಗೇ ಕಣ್ಣುಬಿಟ್ಟು ಮಲಗಿದ್ದೆ. ಆದರೆ ಹೊರಗಡೆ

ಕುರಿ ಕಾಯುವವರ, ನಾಯಿಗಳ ವಿಪರೀತ ಸದ್ದು ಕೇಳುತ್ತಲೂ, ಚಾವಡಿಯ ಹೊರಕಟ್ಟೆಗೆ ಬಂದೆ. ನೋಡುತ್ತೇನೆ, ಎಲ್ಲೆಲ್ಲಿಯೂ ತಂತಮ್ಮ ಮನೆಯ ಕಡೆಗೆ ಸಾಗಿದ್ದ ಕುರಿಗಳು ತುಂಬಿಹೋಗಿದ್ದುವು.

ಕ್ರಮೇಣ ಕತ್ತಲೆಯಾಗತೊಡಗಿದ್ದಿತು. ರಸ್ತೆಯ ಆಚೆಗೆ ಇದ್ದ, ಮಾರುತಿಯ ಒಂದು ಚಿಕ್ಕ ಮಾಡಿನಲ್ಲಿ ಯಾರೋ ದೀಪ ಹಚ್ಚಿ ಹೋಗಿದ್ದರು. ಚಾವಡಿಯಲ್ಲಿ ಮಾತ್ರ ದಟ್ಟವಾದ ಕತ್ತಲೆ.

ಚಾವಡಿಯ ಕಂಬಕ್ಕೊರಗಿ ನಾನು ಕುಳಿತೆ. ಏನೇನೋ ಯೋಚನೆಗಳು. ೩ ವರ್ಷ ಕಾಲವನ್ನು ಈ ಹಳ್ಳಿಯಲ್ಲಿ ನಾನು ಕಳೆಯಬೇಕಿತ್ತು. ಮೊದಲು ಕೆದರಿ ತಿಪ್ಪೆಯಂತಾಗಿದ್ದ ಶಾಲೆಯ ನೆಲವನ್ನು ಸರಿ ಮಾಡಿ, ಹುಡುಗರನ್ನು ಕಲೆಹಾಕಿ, ಶಾಲೆಯತ್ತ ಅವರನ್ನು ಆಕರ್ಷಿಸಬೇಕಿತ್ತು. ಅಲ್ಲಿಯ ಜನರೊಂದಿಗೆ ಕೂಡಿನಡೆದು, ಅವರ ಸಹಾನುಭೂತಿ, ವಿಶ್ವಾಸ, ಪ್ರೀತಿಗಳನ್ನು ಗಳಿಸಬೇಕಿತ್ತು.

ಇದಕ್ಕೆಲ್ಲ ನನಗಿದ್ದ ಒಂದು ದೊಡ್ಡ ಅಡಚಣೆಯೆಂದರೆ ನನ್ನ ಚಿಕ್ಕ ವಯಸ್ಸು ಮತ್ತು ಬಡಕಲು ದೇಹಾಕೃತಿ. ಮೇಲೆ ಇಂಥ ಹಳ್ಳಿಗೊಡ್ಡರ ಸಂಗತಿ ! ಶಾಲೆಯ ಬೀಗದ ಕೈಯನ್ನು ನನಗೆ ಕೊಡುವಾಗ, ತಾಲೂಕಿನ ಮಾಸ್ತರರು ಹೇಳಿದ್ದರು : ಒಂದು ದಿನವೂ ಇಲ್ಲಿ ಹತ್ತು ಹುಡುಗರಾದರೂ ನೇಮದಿಂದ ಶಾಲೆಗೆ ಬಂದುದಿಲ್ಲವಂತೆ. ಇಂಥದರಲ್ಲಿ ನಾನು ಹೇಗೆ ಮಾಸ್ತರಿಕೆಯನ್ನು ಮಾಡಿಯೇನು ಎಂಬ ಚಿಂತೆಯಲ್ಲಿ ಮುಳುಗಿದೆ.

ಆಗ, "ಯಾರು, ಮಾಸ್ತರ ಕುಂತಾನೇನು" ಎಂದು ಕೇಳಿದ ಹಾಗಾಯಿತು. ಅದು ಮುದುಕನದೇ ದನಿಯೆಂದು ಗುರುತು ಹಿಡಿದೆ.

"ಇದ್ನೋಡು, ಹಾಲು ತಂದೇನಿ– ಕುರೀದು. ರೊಟ್ಟಿ ತಿಂದೆಯಾ ?" ಎಂದು ಕೇಳುತ್ತ ಅವನು ಹಾಲಿನ ಚೆಂಬನ್ನು ಕೆಳಗೆ ಇಟ್ಟಂತೆ ತೋರಿತು. ಕತ್ತಲೆಯಲ್ಲಿಯೆ ನಾನು ತಡಕಾಡಿ ಆ ಚೆಂಬನ್ನು ಕೈಗೆ ತಗೆದುಕೊಂಡೆ.

ಅಷ್ಟರಲ್ಲಿ ಮತ್ತೊಬ್ಬರು ಯಾರೊ ಬಂದಂತಾಯಿತು. "ಯಾರು, ಆನಂದಾ ಏನು ?" ಎಂದು ಮುದುಕನೇ ಅವನನ್ನು ಮಾತನಾಡಿಸಿದನು—

"ಮಾಸ್ತರಾ ಕತ್ತಲದಾಗ ಒಬ್ಬನೇ ಕುಂತಾನ, ಕಾಣುಂದಿಲ್ಲೇನು ? ಹೋಗು ಮನೀಗೆ. ಹೋಗಿ ಅಟು ಚಿಮಣಿ ಹಚಿಗೊಂಡು ಬಾ."

ಆನಂದಾ ಮೊದಲು ನನ್ನದೆಲ್ಲ ಪೂರ್ವಾಪರವನ್ನು ಕೇಳಿಕೊಂಡು, ತನ್ನ ಕುತೂಹಲ ತಣಿದ ಮೇಲೆಯೆ ಚಿಮಣಿ ಹಚ್ಚಿಕೊಂಡು ಬಂದನು. ಅದನ್ನು ನಾನು ಶಾಲೆಯೊಳಗೆ ಒಯ್ದೆ. ರೊಟ್ಟಿಯನ್ನು ತಿನ್ನತೊಡಗಿದೆ.

ಅಷ್ಟರಲ್ಲಿ ಆ ಚಾವಡಿ ಕಟ್ಟೆಗೆ ಹೆಚ್ಚೆಚ್ಚು ಜನರು ಬಂದು ಸೇರಿದುದು ಅವರ ಮಾತುಗಳ ಧ್ವನಿಯ ಮೇಲಿಂದ ತಿಳಿದುಬಂತು. ಯಾರದೊ ಕುರಿ ಯನ್ನು ತೋಳವು ಹಿಡಿದೊಯ್ದ ಬಗ್ಗೆ ಚರ್ಚೆ ನಡೆದಾಗ, ನಾನು ಬಾಗಿಲಿಗೆ ಬಂದು ನಿಂತೆ. ಇತರರು ಆ ಮುದುಕನನ್ನು 'ಧಣಿ' ಎಂದು ಕರೆದು, ಮರ್ಯಾದೆ ಕೊಟ್ಟು ಮಾತಾಡುತ್ತಿದ್ದಾಗ, ಬನಗರವಾಡಿಗೆ ಅವನೇ 'ಕಾರಭಾರಿ'ಯೆಂದು ತಿಳಿದುಬಂತು.

ಆ ಕತ್ತಲ ಸಭೆಯನ್ನುದ್ದೇಶಿಸಿ 'ಮುದುಕನು "ಏನ್ರೆಲಾ, ಮಾಸ್ತರ ಬಂದಾನು. ನಾಳಿನಿಂದ ಪೋರಗೋಳ್ನ ಶಾಲೆಗೆ ಕಳಸ್ರಿ" ಎಂದನು. ಅದಕ್ಕೆ ಉತ್ತರವಾಗಿ ಒಂದು ದನಿ ಕೇಳಬಂತು.

"ಎಲ್ಲಿ ಅದಾವು ಪೋರಗೋಳು ?"

"ಹಾಂಗಾರ, ಹಳ್ಳೇನು ಬಂಜಿ ಐತೇನು ?" ಹಾಗೆ ಕೇಳುತ್ತ ಮುದುಕನ ದನಿ ಏರಿದಾಗ "ಹಾಂಗಲ್ಲಾ. ಸಾಲೀ ಕಲಿಯಾಕ ಪೋರಗೋಳು ಎಲ್ಲಿ ಖಾಲಿ ಕುಂತಾವು" ಎಂದು ಇನ್ನೊಬ್ಬ ನುಡಿದನು.

ಆಗ ನಾನು "ಚಿಕ್ಕ ಮಕ್ಕಳು– ಅವನ್ನಾದರೂ ಕಳಿಸಿರಿ. ಅವರಿಗೆ ಓದು ಬರೆಹ ಬಂದರೆ ಅದರಿಂದ ಉಪಯೋಗವಾದೀತೇ ಏನಾ ಹಾನಿಯಿಲ್ಲಾ" ಎಂದು ಗಟ್ಟಿಯಾಗಿ ಹೇಳಿದೆ.

"ಮತ್ತೆ ಅವರ ಹೊಟ್ಟೆಗೇನು ?" ದೂರದಿಂದ ಇನ್ನೊಬ್ಬ ಯಾವನೊ ಮಾತಾಡಿದ.

ಇದಕ್ಕೆ ನನ್ನಲ್ಲಿ ಉತ್ತರವಿಲಿಲ್ಲ. ಸಣ್ಣ ಮಕ್ಕಳ ಹೊಟ್ಟೆಗೆ ಹಾಕುವುದು ತಂದೆ ತಾಯಿಗಳ ಕೆಲಸ ಎಂದೇ ನಾನು ತಿಳಿದುದು. ತಮ್ಮ ಹೊಟ್ಟೆಗಾಗಿ

ಮಕ್ಕಳೂ ದುಡಿಯಬೇಕಾಗುತ್ತದೆ ಎಂಬುದು ನನಗೆ ಹೊಸ ವಿಷಯವಾ ಗಿದ್ದಿತು.

"ಹೊಟ್ಟಿಗೆ ಇಲ್ಲದಿದ್ರ ನನ್ನ ಮನೀಗೆ ಕಳಸು. ಸೇರು ಜೋಳಾ ಕೊಡತೀನಂತ. ಎಲ್ಲಾದಕೂ ನಿಮ್ಮದು ಅಡ್ಡಗಾಲೇ ಏನು ? ಪಂತ ಸರಕಾರ ಸಾಲೀ ತಗದೇತಿ. ಮಾಸ್ತರನ್ನ ಸಂಬಳಾ ಕೊಟ್ಟು ಇಟ್ಟಾರ. ಈಟಿದ್ದು ನಿಮಗ ಕಲಿಯಾಕ ಬ್ಯಾಡಾ !"

ಮುಂದುಕನು ತುಸು ಅಬ್ಬರದಿಂದ ಹೀಗೆ ಹೇಳುತ್ತಲೂ ಉಳಿದವರು ಒಬ್ಬೊಬ್ಬರೇ ದನಿಗೂಡಿಸಿದರು : ನಮ್ಮ ಸದಾ ಬರ್ತಾನು... ಅವರ ಸಖ್ಯಾ ಬಂದಾನು... ನಿಮ್ಮ ಮಹದಾ ಬರ್ತಾನೇನು... ಎಂಬ ಧರತಿಯಲ್ಲಿ ಅವರ ಆಲೋಚನೆ ನಡೆಯಿತು.

[೨]

ಬನಗರವಾಡಿಗೆ ನಾನು ಬಂದ ಒಂದು ವಾರದಲ್ಲಿ ಮುಂದುಕನು ಚಾವ ಡಿಯ ಬಳಿಯಲ್ಲಿಯೇ ಒಂದು ಕೋಣೆಯನ್ನು ತೆರವು ಮಾಡಿಸಿ ಕೊಟ್ಟ. ೧೫ ದಿನ ಕಳೆದವು. ಶಾಲೆ ಸರಿಯಾಗಿ ಆರಂಭವಾಗಿರಲಿಲ್ಲ. ೨–೩ ಹುಡುಗರು ಬರುವುದು, ತಾಸರ್ಧ ತಾಸು ಕುಳ್ಳಿರುವುದು. ಆ ಮೇಲೆ ಒಂದರ, ಎರಡರ ನಿಮಿತ್ತ ಮಾಡಿ ಎದ್ದು ಹೊರಟರೆ ಪುನಃ ಅವರ ಪತ್ತೆಯೇ ಇಲ್ಲ. ಏನಾದರೂ ಸ್ವಲ್ಪ ಬೈದು, ಅಥವಾ ಒತ್ತಿ ಹೇಳಿದರೆ ಸಾಕು, ಅವು ಅಳುತ್ತ ಮನೆಗೆ ಹೋಗಿ ಬಿಡುತ್ತಿದ್ದವು. ವಿಷಯ ಅಲ್ಲಿಗೇ ಮುಗಿಯಲಿಲ್ಲ ! ಅವರ ಅವ್ವಂದಿರು ಶಾಲೆಯ ಬಾಗಿಲು ತನಕ ಬಂದು "ಯಾನೊ ಎಪ್ಪಾ, ನಿನಗೇನು ಮಕ್ಕಳು, ಮರಿ ಅದಾವಿಲ್ಲೊ, ನಿನ್ನ ಸಾಲಿ ಮಣ್ಣಾಗ ಅಡಗಾ" ಎಂದು ನನ ಗೆಯೆ ಬೈದು, ಮಗನನ್ನು ಮುಂದಿಟ್ಟುಕೊಂಡು ಹೊರಡುತ್ತಿದ್ದರು.

ಕ್ರಮೇಣ ನನಗೆ ಈ ಹಳ್ಳಿಯ ಕುರುಬರ, ಒರಟು ಸ್ವಭಾವದ ಪರಿ ಚಯವಾಗತೊಡಗಿತು. ಅವರಲ್ಲಿ ಆದರಾರ್ಥವಾಗಿ ಬಹುವಚನದಿಂದ ಕರೆ ಯುವ ರೂಢಿಯೇ ಇರಲಿಲ್ಲ. ಬಿಡಲಿ; ಸಲಿಗೆ ಇದ್ದಾಗ ಏಕವಚನದಿಂದ ಕರೆಯುವುದು ಕಿವಿಗೆ ಹಿತವಾದುದೇ. ಆದರೆ ಮೊದಲ ದಿನ ಭೆಟ್ಟಿಯಾದ ಆ ಛಾಲೇಕಾರನ ಹಾಗೆ ಯಾರಾದರೂ ಒರಟುತನದಿಂದ ಒಂಟಿ ಹೆಸರಿನಲ್ಲಿ

ಮಾತನಾಡಿಸಿದರೆ ಸಹಿಸಲಾದೀತೇ ? ಒಂದು ದಿನ ರಾತ್ರಿ ಆ ಭಾಲೇಕಾರ–ಅವನ ಹೆಸರು ದಾದೂ–ನನ್ನ ಕೋಣೆಗೆ ಧುತ್ತೆಂದು ಬಂದು ಹೇಳ ಕೇಳದೇ ನನ್ನ ಜಮುಖಾನೆಯ ಮೇಲೆ ಕುಳಿತು, ಚಿಲುಮೆಯನ್ನು ಹಚ್ಚಿ, ಸೇದತೊಡಗಿದನು. ಆ ಹಳ್ಳಿಯಲ್ಲಿ ಇವನೇ ಸ್ವಲ್ಪ ಸಾಕ್ಷರಿಯಾಗಿದ್ದ. ತಾಲೂಕಿನ ಅಧಿಕಾರಿಗಳ ಜೊತೆಗೆ ತುಸು ಸಂಪರ್ಕವಿದ್ದದರಿಂದ, ಊರಲ್ಲಿ ಒಳ್ಳೇ ಆಢ್ಯತೆಯಿಂದ ಮೆರೆಯುತ್ತಿದ್ದ. ಇನ್ನೊಬ್ಬರ ಹುಳುಕು ತೆಗೆದು ಕುಚೇಷ್ಟೆ ಮಾಡುತ್ತ ಓಡಾಡುವದೇ ಅವನ ಕಸಬು ಆಗಿದ್ದಿತು.

"ನೋಡಲೇ, ಹಿಂದಿನ ಮಾಸ್ತರಾ ನನ್ನ ಕೈಯಿಂದ ಹೊಡತಾ ತಿಂದಾನು. ಇಲ್ಲೇ ! ಇದs ಭಾಲೇದಿಂದ ಹೊಡದಾಗ ಎಚ್ಚರದಪ್ಪಿ ಬಿದ್ದಿದ್ದಾ, ಮಂಗಾ— ನಮ್ಮೂರಾಗಿನ ಯಾವಾರದಾಗ [ವ್ಯವಹಾರ] ಕೈ ಹಾಕಾಕ ಬಂದಿದ್ದಾ. ಅದಕ್ಕs ನಿನಗ ಹೇಳಾಕ ಬಂದ್ನಿ. ಹುಡುಗೂರು ಬಂದರs ಸಾಲೀ ಕಲಸು, ನಮಗ ಬುದ್ಧೀ ಕಲಸಾಕ ಬಂದೆಂದ್ರ ನೋಡು !" ಎಂದು ತಾಕೀದು ಮಾಡಿ, ರಭಸದಿಂದ ಒಂದೆರಡು ಬಾರಿ ಚಿಲುಮೆಯನ್ನು ಸೇದಿ, ತನ್ನ ಭಾಲೆಯನ್ನು ಎತ್ತಿಕೊಂಡವನೆ ಎದ್ದು ಹೋದನು.

ನಾನಿನ್ನೂ ಅವನ ವಿಚಾರದಲ್ಲಿಯೆ ಇದ್ದಾಗ, ಆ ಕತ್ತಲೆಯಲ್ಲಿ ಮತ್ತೊಬ್ಬನು ಒಳಗೆ ಬರುತ್ತಲೂ ನಾನು ಭಯದಿಂದ ತತ್ತರಿಸಿದೆ. ಆದರೆ ಬಂದವನು ಹೊಸ್ತಿಲ ಬಳಿಯಲ್ಲಿ ಸುಮ್ಮನೆ ಕುಳಿತ. ಗೊಗ್ಗರ ದನಿಯಲ್ಲಿ "ಯಾರೋ ನೀನು" ಎಂದು ಕೇಳಿದೆ.

"ನಾನು ಆಯುಬೂ" ಎಂದನಾತ. ಅವನ ಸ್ವರ ಸೌಮ್ಯವಾಗಿದ್ದುದರಿಂದ, ತುಸು ಧೈರ್ಯ ಬಂತು.

"ಇಲ್ಲಿಯವನೇ ಏನು ?"

"ಅಲ್ಲ, ಎಖಿತ–ಪುರದವ. ಹೊಟ್ಟೀ ಸಲುವಾಗಿ ಹಿಂಗೇ ಊರೂರು ತಿರಗತೇನಿ. ಚಾವಡೀ ಮುಂದ ಹೊಂಟಾಗ 'ಮಾಸ್ತರಾ ಒಬ್ಬನs ಅದಾನು, ಅವನ ಕೂಡ ಇರು ಹೋಗು, ಅಂದರು. ಅದಕ ಇತ್ತ ಬಂದ್ನಿ."

ಹರಿದು ಚಿಂದಿಯಾದ ಕುಡತಾ ಮತ್ತು ಮಾಸಲು ಪಾಯಿಜಾಮು ಹಾಕಿದ್ದ, ನನ್ನಷ್ಟೆ ವಯಸ್ಸಿನ ಆಯುಬೂನನ್ನು ಅವನ ಪೂರ್ವಾಪರದ ಬಗ್ಗೆ

ಹೆಚ್ಚೇನೂ ಕೇಳಲಿಲ್ಲ. ನನ್ನ ಬೆಳಗಿನ ಫಲಾಹಾರಕ್ಕೆಂದು ಇಟ್ಟುಕೊಂಡಿದ್ದ ಅದೊಂದು ರೊಟ್ಟಿಯನ್ನು ಅವನಿಗೆ ಕೊಟ್ಟೆ. ಆತ ಕೂತಲ್ಲಿಯೇ ಅದನ್ನು ಗಬಗಬನೆ ತಿಂದು ಮುಗಿಸಿ, ಬೊಗಸೆ ಒಡ್ಡಿ, ನೀರು ಹಾಕಿಸಿಕೊಂಡು ಬಾಯಿ ಮುಕ್ಕಳಿಸಿ ಮೊದಲಿನ ಜಾಗದಲ್ಲಿಯೇ ಬಂದು ಕುಳಿತುಕೊಂಡನು. ತುಸು ಹೊತ್ತಿನಲ್ಲಿ, ಕುಳಿತಲ್ಲಿಯೆ ನಿದ್ರಿಸತೊಡಗಿದ. ನಾನು ನನ್ನಲ್ಲಿದ್ದ ಕಂಬಳಿಯನ್ನು ಅವನ ಮೈಮೇಲೆ ಒಗೆದೆ. ಅದರ ಸದ್ದು, ಸ್ಪರ್ಶಗಳಿಗೆ ಕಣ್ಣುಬಿಟ್ಟು ನನ್ನನ್ನೊಮ್ಮೆ ನೋಡಿದ. ಅದನ್ನು ತೆಗೆದುಕೊಳ್ಳುವುದಕ್ಕೆ, ಮೊದಲಿಗೆ ಹಿಂಜರಿದರೂ ನನ್ನ ಚಾದರವು ಅವನ ದೃಷ್ಟಿಗೆ ಬಿದ್ದಿರಬೇಕು. ಆ ಮೇಲೆ ಆ ಕಂಬಳಿಯ ಅರ್ಧವನ್ನು ಹಾಸಿಕೊಂಡು, ಉಳಿದದ್ದನ್ನು ಹೊದ್ದುಕೊಂಡು ಹಾಲು-ಅನ್ನ ತಿಂದು ಸ್ವಸ್ಥವಾಗಿ ಮಲಗುವ ಬೆಕ್ಕಿನಂತೆ ಮಲಗಿಬಿಟ್ಟನು. ಇನ್ನು ಮುಂದೆ ಆ ದಾದೂನಿಗೆ ಯಾವ ರೀತಿಯಿಂದಲೂ ಮಣಿಯಬಾರದು ಎಂದು ನಿಶ್ಚಯಿಸಿ ನಾನೂ ನಿಶ್ಚಿಂತೆಯಿಂದ ಮಲಗಿದೆ.

[೩]

ಇತ್ತೀಚೆಗೆ ೮-೧೦ ಹುಡುಗರು ನಿಯಮದಿಂದ ಶಾಲೆಗೆ ಬರುತ್ತಿದ್ದರು. ಒಬ್ಬರ ಮೈಮೇಲೂ ಪೂರ್ಣ ಬಟ್ಟೆಯೆಂಬುದಿರಲಿಲ್ಲ. ಮುಖ ತೊಳೆಯದೇ, ಹಲ್ಲು ಕೂಡಾ ತಿಕ್ಕದೆ ಹಾಗೇ ಬಂದು ಕೂಡುತ್ತಿದ್ದರು. ಮುಖ ತೊಳೆದು, ಹಲ್ಲು ತಿಕ್ಕಿಕೊಂಡು ಬರಲೆಂದು ಮನೆಗೆ ಕಳಿಸಿದರೆ ಅವರು ಅತ್ತೇ ಹೋಗಿ ಬಿಡುತ್ತಿದ್ದರು. ಉಗುಳಿನಿಂದ ಪಾಟಿ ಒರೆಸುವುದಂತೂ ಎಗ್ಗಿಲ್ಲದೆ ನಡೆಯುತ್ತಿತ್ತು. ಪಾಟಿಯನ್ನು ಒರೆಸಲು ಒದ್ದೆ ಬಟ್ಟೆ ತರಹೇಳಿದುದು ಯಾವ ಪ್ರಯೋಜನಕ್ಕೂ ಬರಲಿಲ್ಲ.

ಬೆಳಿಗ್ಗೆ ಸೇರಿದ ಶಾಲೆ ೧೧ ಗಂಟೆಗೆ ಬಿಟ್ಟು. ಪುನಹ ಮೂರಕ್ಕೆ ಸೇರಿ ಆರಕ್ಕೆ ಬಿಡುತ್ತಿತ್ತು. ಅಡವಿಗೆ ಹೋಗುವ ದೊಡ್ಡ ಕುರುಬ ಹುಡುಗರು ಸಂಜೆಯಾದ ಮೇಲೆ ಶಾಲೆಯ ಪಟಾಂಗಣದಲ್ಲಿ ಲೇಜಿಮ್, ದುಂಡು ಕಲ್ಲು ಎತ್ತುವುದು, ಪಟ್ಟಿ ತಿರುಗಿಸುವುದು ಮುಂತಾದ ವ್ಯಾಯಾಮದ ಆಟಗಳಲ್ಲಿ ತೊಡಗುತ್ತಿದ್ದರು. ದೊಡ್ಡವರೆಲ್ಲಾ ಚಾವಡಿಯ ಹತ್ತಿರದ ಹನುಮನ ಗುಡಿದ ಮುಂದೆ ಇಲ್ಲವೆ ಬೇವಿನ ಕಟ್ಟೆಯ ಮೇಲೆ ಕುಳಿತು, ಈ ಆಟಗಳನ್ನು ನೋಡುತ್ತಿದ್ದರು. ಕೆಲವು ಸಲ ನಾನೂ ಅವರ ಆಟಗಳಲ್ಲಿ ಭಾಗವಹಿಸುತ್ತಿದ್ದೆ.

ಇದ್ದುದರಲ್ಲಿಯೇ ಕುರುಬರ ಬೀರಾನ ಮಗ ಸತಾ ಸ್ವಲ್ಪ ಹುಶಾರ್ ಹುಡುಗನಿದ್ದ, ವಯಸ್ಸು ೧೨–೧೩ ಆಗಿದ್ದರೂ ಅದಕ್ಕಿಂತ ಹೆಚ್ಚಿಗೇನೆ ಬೆಳೆದಿದ್ದ. ಓದು ಬರೆಹ ಕಲಿಯುವದರಲ್ಲಿ ಅವನಿಗೆ ಆಸಕ್ತಿ ಇತ್ತಾದ್ದರಿಂದ ಅವನು ನನ್ನ ನೆಚ್ಚಿನ ಶಿಷ್ಯನಾಗಿದ್ದ. ಇವನೊಬ್ಬನಾದರೂ ಕೊನೆಯ ಪರೀಕ್ಷೆಗಾಗಿ ತಾಲೂಕಿನ ಶಾಲೆಗೆ ಹೋಗುವಂತಾಗಲಿ ಎಂದು ಆಶಿಸುತ್ತಿದ್ದೆ.

ಇವರಲ್ಲದೆ ಮೂವರು ಬಲು ದೊಡ್ಡ ಹುಡುಗರು ತಪ್ಪದೆ ಶಾಲೆಯಲ್ಲಿ ಬಂದು ಕೂಡುತ್ತಿದ್ದರು. ಅವರೆಂದರೆ ಆಯುಬೂ, ಆನಂದಾ ರಾಮೋಶಿ ಮತ್ತು ರಾಮಾ ಬನಗರ. ಇಷ್ಟೊಂದು ನಿಯಮಿತವಾಗಿ ಅವರು ಶಾಲೆಗೆ ಬರುವುದು ನನಗೆ ಆಶ್ಚರ್ಯವನ್ನುಂಟು ಮಾಡಿದ್ದಿತು. ಆದರೆ ಮಾಡಲು ಬೇರೆ ಕೆಲಸವಿಲ್ಲದೆ ಕಾಲಹರಣಕ್ಕೆಂದು ಬರುತ್ತಿದ್ದರೆಂಬುದು ಆ ಮೇಲೆ ತಿಳಿಯಿತು.

ಆಯುಬೂ ಕುರಿ ಕೊಯ್ಯುವ ಕಟುಕನಾದ್ದರಿಂದ ಊರವರು ತಾವೇ ಅವನ ರೊಟ್ಟಿಯ ವ್ಯವಸ್ಥೆ ಮಾಡಿ, ಅವನ ಚಿಂತೆಯನ್ನು ತಪ್ಪಿಸಿದ್ದರು. ನಿಂತಲ್ಲಿ ತಿಂದು, ಕೂತಲ್ಲಿ ಮಲಗಿ ಆತ ನಿಶ್ಚಿಂತನಾಗಿದ್ದ. ಲಂಡ ಚಣ್ಣ, ಮೈಮೇಲೆ ಶರ್ಟಿಲ್ಲದೆ ಒಂದು ಕೋಟನ್ನು ಧರಿಸುತ್ತಿದ್ದ ಆನಂದಾ ರಾಮೋಶಿಯು ತಾನು ದುಡಿಯುವ ಪ್ರಶ್ನೆಯನ್ನು ಬಲು ಸುಲಭವಾಗಿ ಬಗೆಹರಿಸಿಕೊಂಡಿದ್ದನು. ಕಂಬಳಿಯೊಂದನ್ನು ಹೆಗಲಿಗೆ ಹಾಕಿಕೊಂಡು ಅಡವಿಯತ್ತ ಹೊರಡುತ್ತಿದ್ದನು. "ಯಾವ ಕಡೆಗೊ ರಾಮಾ?" ಎಂದು ಯಾರಾದರೂ ಕೇಳಿದರೆ, "ಲಗಾಡೇನ ತ್ವಾಟಕ್ಕೆ" ಎನ್ನುವ, ಲಗಾಡೆ ಕೇಳಿದರೆ "ತುಕಾರಾಮ ಕಾರಂಡೇನ ಗದ್ದೆಗೆ" ಎಂದು ಹೇಳುವ, ತುಕಾ ಕಾರಂಡೇನ ಕೇಳಿಕೆಗೆ "ಇಲ್ಲೇ ಸ್ವಲ್ಪ ಭೋಸಲೇನ ಹೊಲಕ್ಕೆ ಹೋಗಿ ಬರುವೆ" ಎಂದು ಉತ್ತರ ಹೇಳುತ್ತಿದ್ದ. ಹೀಗೆಲ್ಲ ಇವೆಲ್ಲ ಸ್ಥಳಗಳಿಗೂ ಹೋಗಿ, ಎಲ್ಲೆಲ್ಲಿ ಯಾವ ಯಾವ ಬೆಳೆ ಇದೆ ಎಂದು ಗುರುತಿಟ್ಟು, ರಾತ್ರಿ ಅಲ್ಲಲ್ಲಿಯ ನಾಲ್ಕೆಂಟು ಗೋವಿನಜೋಳದ ತೆನಿ, ಒಂದಿಷ್ಟು ಈರುಳ್ಳಿ, ಮೆಣಸಿನಕಾಯಿ ಇವೆಲ್ಲವನ್ನು 'ಸಂಪಾದಿಸಿ' ತರುವ !

ಈ ಹುಟ್ಟು ಕಳ್ಳ ಗುಣವೇ ಅವನ ಜೀವನಾಧಾರವಾಗಿತ್ತು. ಅಲ್ಲದೆ, ಸಣ್ಣಪುಟ್ಟ ಕಳವುಗಳನ್ನು ತಾನಾಗಿ ಒಪ್ಪಿಕೊಳ್ಳುವ ಸಾಚಾತನವೂ ಅವನಲ್ಲಿದ್ದಿತು— ಅದೂ ೧೫–೨೦ ದಿನಗಳ ನಂತರ! "ಲೇ ಮಂಗನೆ, ಕಳವು ಮಾಡೊದಲ್ಲದೆ ನನ್ನ ತನಕಾ ಬಂದು ಹೇಳೂs ಅಟು ಸೊಕ್ಕಿಗೇರಿದೆಯಾ? ನಿಲ್ಲು ಮಾಡ್ತೇನಿ ನಿನಗ" ಎಂದು ಮಾಲೀಕನು ನುಡಿದರೆ, "ಮಾಡಿದ ತೆಪ್ಪು ಒಪಿಗ್ಕೊಂಡ್ರು ಮಂಗದ ಹೋತರಿ. ಅಲ್ಲರೀ, ಬೇಡಿದರ ಯಾರೂ ಕೊಡೂದುಲ್ಲ. ಮತ್ತ ಯಾನ ಮಾಡಬೇಕು? ಕಾಗಿ, ಗುಬ್ಬಿ, ಹುಳಾಹುಪ್ಪಡಿ ತಿನ್ನೂ ಮುಂದ ನಿಮ್ಮನ್ನ ಕೇಳೇ ತಿನ್ನತಾವೇನ್ರಿ?" ಎಂದು ಹೇಳುವ!

ಬನಗರ ರಾಮಾ ಮಾತ್ರ ಸಂಸಾರವಂತನಾಗಿದ್ದ. ಅಲ್ಲದೆ ಕುರಿಗಳ ದೊಡ್ಡ ಮಂದೆಯೂ ಇದ್ದಿತು. ಆದರೆ ಅವನ ತಂದೆ ಕಾಕುಬಾ ಎಲ್ಲ ಜವಾಬ್ದಾರಿಯನ್ನು ಹೊತ್ತಿದ್ದನಾದ್ದರಿಂದ, ಇವನು ವ್ಯೈಗಳ್ಳತನವನ್ನು ರೂಢಿಸಿಕೊಂಡಿದ್ದನು.

ಒಂದು ದಿನ ಆಯುಬೂ, ಆನಂದಾ ಇಬ್ಬರೂ ಹೋಗುವ ದಾರಿಯನ್ನೆ ಕಾಯುತ್ತಿದ್ದ ರಾಮೂ ಮೆಲ್ಲನೆ ನನ್ನ ಬಳಿ ಸರಿದು "ಮಾಸ್ತರಾ, ನನ್ನದೊಂದು ಕೆಲಸ ಐತಿ. ನಿನ್ನ ತಾವೆ" ಎಂದು ಪೀಠಿಕೆ ಹಾಕಿದನು.

"ಏನದು?" ಎಂದು ನಾನು ಕೇಳಿದಾಗ, ಅತ್ತಿತ್ತ ನೋಡಿ, ಮೆಲ್ಲನೆ "ನನ್ನ ಹತ್ರ ಒಂದು ತುರುಬಿನ ರೂಪಾಯಿ ಐತಿ. ಈಗ ಚಾಲ್ತಿಯಲ್ಲಿ ಇಲ್ಲಾ. ನೀ ತಾಲೂಕಿಗೆ ಹೋದಾಗ, ನಿನ್ನ ವಶೀಲಿಯಿಂದಾ ಮುರಿಸಿ ತರತೀಯಾ?" ಎಂದನು.

ತುರುಬಿನ ರೂಪಾಯಿ, ವಿಕ್ಟೋರಿಯಾ ರಾಣಿಯ ಛಾಪಿನ ಹಳೇ ಬೆಳ್ಳಿಯ ನಾಣ್ಯ. ಅವಳ ಕಿರೀಟ ಹಾಗೂ ತಲೆಗೂದಲು ಅದೆಂತು ತುರುಬಿನ ಹಾಗೆ ಕಂಡಿತೋ! ಅಂತೂ ಮರುವಾರ, ತಾಲೂಕಿನ ಸ್ಥಳಕ್ಕೆ ಹೋದಾಗ ಅದನ್ನು ಕೊಂಡೊಯ್ದೆ. ನನ್ನ ಗುರುತಿನ ವ್ಯಾಪಾರಿಗೆ ಅದನ್ನು ಕೊಟ್ಟಾಗ, ಅದನ್ನು ಮುರಿಸುವುದಷ್ಟೇ ಅಲ್ಲ; ಮೇಲೆ ೨ ಆಣೆ ಹೆಚ್ಚಿಗೆ ಬಂದವು. ಹಾಗೆಂದು ರಾಮೂನಿಗೆ ೧೮ ಆಣೆ ಕೊಟ್ಟಾಗ ಅವನಿಗೆ ಬಹಳ ಖುಶಿಯಾಯಿತು. ಆ ಕ್ಷಣವೇ ಅದರಲ್ಲಿಂದ ಒಂದಾಣೆ ತೆಗೆದು

“ಇದು ತಗೋ ಮಾಸ್ತರಾ, ಎಲೆ, ಅಡಿಕಿ ಸಲುವಾಗಿ” ಎಂದು ಕೊಡಬಂದನು! ಬೇಡವೆಂದು ಹೇಳಿದರೆ ಕೇಳಲೊಲ್ಲ. ಮುಂದೆಯೂ ಇಂಥ ಹಲವಾರು ನಾಣ್ಯಗಳನ್ನು ಮುರಿಸಿ ತಂದಾಗಲೆಲ್ಲ, ಅವನ ಈ ಬಗೆಯ ಒತ್ತಾಯವಿದ್ದೇ ಇರುತ್ತಿದ್ದಿತು. ನಾನು ಆ ರೀತಿಯ ಒಂದು ಕಾಸೂ ಮುಟ್ಟದಿದ್ದಾಗ, ಅವನು ಒಂದು ದಿನ ತನ್ನ ಮನೆಗೆ ಕರೆದುಕೊಂಡು ಹೋದನು. ಕಂಬಳಿ ಹಾಸಿ ಕೂಡ್ರಿಸಿ, ಒಂದು ತಂಬಿಗೆಯ ತುಂಬ ಕುರಿ ಹಾಲನ್ನು ತಂದು ಮುಂದಿಟ್ಟನು.

ಅಲ್ಲಿಯೇ ಇದ್ದ ಅವನ ತಂದೆ ಕಾಕುಬಾ ಒಲೆಯ ಮುಂದೆ ಕಾಸಿ ಕೊಳ್ಳುತ್ತ ಕುಳಿತಿದ್ದನು. ಎಪ್ಪತ್ತು-ಎಂಬತ್ತು ವರ್ಷದ ಮುದುಕನಾದರೂ, ಅವನು ಕುರಿ ಮೇಯಿಸುತ್ತ ಅಡವಿಗೆ ಹೋಗುತ್ತಿದ್ದನೆಂಬ ಮಾತು ನನಗೆ ಅಚ್ಚರಿಯನ್ನುಂಟುಮಾಡಿತು. ದೂರದಿಂದ ಬರುವ ತೋಳದ ನಾತವು ಅದು ಹೇಗೊ ಮುದುಕನ ಮೂಗಿಗೆ ಬಡಿಯುತ್ತಿದ್ದಿತು. ಇನ್ನೊಬ್ಬರ ಹಿಂಡಿನಲ್ಲಿ ಕೂಡಿದ್ದ ತಮ್ಮ ಕುರಿಗಳನ್ನು ಗುರುತಿಸುವುದರಲ್ಲಿಯೂ ಮುದುಕ ಬಹಳ ನಿಸ್ಸೀಮನಂತೆ.

ಹಾಲನ್ನು ಕುಡಿದು ನಾನು ಹೊರಡಲು ಸಿದ್ಧನಾದೆ. ಆಗ ರಾಮಾ ನನ್ನನ್ನು ಒಳಗೆ ಕರೆದೊಯ್ದು ಒಂದು ಮಡಿಕೆಯನ್ನು ತೋರಿಸಿದನು, ಅದರಲ್ಲೆಲ್ಲ ಆ ಬೆಳ್ಳಿಯ ರೂಪಾಯಿಗಳು! ಎಣಿಸಿ ನೋಡಿದಾಗ ೩೪೦ ನಾಣ್ಯಗಳು ಹೊರಟವು. ಯಾವ ಅಳುಕೂ ಇಲ್ಲದೆ ರಾಮಾ ಅವುಗಳನ್ನು ನನ್ನ ಸ್ವಾಧೀನ ಮಾಡಿದನು.

“ರಾಮಾ, ಇಷ್ಟೆಲ್ಲ ರೂಪಾಯಿಗಳನ್ನು ಒಮ್ಮೆಲೇ ಹೇಗೆ ಮುರಿಸುವದು ?” ಎಂದೆ ನಾನು.

“ನನಗೇನೂ ಅವಸರ ಇಲ್ಲ. ಬೇಕಾದರೆ ತಿಂಗಳೊಪ್ಪತ್ತಾಗಲಿ” ಎಂದ.

[೪]

ಕೇವಲ ೧೦-೧೫ ಹುಡುಗರಿಗೆ ಅದೂ ಅವರು ಶಾಲೆಗೆ ಬಂದಾಗ ಮಾತ್ರ ಮಾಸ್ತರಿಕೆಯನ್ನು ಮಾಡಬೇಕಾದ ನನಗೆ ಊರವರ ಅನ್ಯ ಕೆಲಸಗಳು ಕಾದಿರುತ್ತಿದ್ದವು. ಪತ್ರಗಳನ್ನು ಬರೆದುಕೊಡುವದು, ಸರಕಾರಕ್ಕೆ ಅರ್ಜಿ

ಬರೆಯುವುದು ಇವು ಮುಖ್ಯವಾಗಿದ್ದವು. ಶನಿವಾರ ಸಂಜೆ ನಾನು ನನ್ನ ಊರಾದ ವಿಭೂತಿವಾಡಿಗೆ ಹೊರಟೆನೆಂದರೆ, ನನ್ನ ಜೇಬು ಅವುಗಳಿಂದ ತುಂಬಿರುತ್ತಿದ್ದಿತು. ಅವರ ತಾಲೂಕು ಕಚೇರಿಯ ಸಣ್ಣ ಪುಟ್ಟ ಕೆಲಸಗಳನ್ನೂ ನಾನೇ ನೋಡಿಕೊಳ್ಳಬೇಕು. ಶಾಲೆಯ ವಿಷಯವಲ್ಲದೆ ಕಾಯದೆಯ ವಿಷಯವೂ ಮಾಸ್ತರರಿಗೆ ಗೊತ್ತಿರುತ್ತದೆಯೆಂದೇ ಅವರ ಭಾವನೆ. ವಯಸ್ಸಿನಿಂದ ನಾನು ಸಣ್ಣವನಿದ್ದರೂ ಗಂಡ ಹೆಂಡಿರ ಜಗಳ, ಕುರಿ ಕದ್ದುದರ ಫಿರ್ಯಾದು ಇವೂ ನನ್ನ ಕಡೆಗೆ ಬರುತ್ತಲಿದ್ದವು.

ಮುಂಗಾರು ಮಳೆ ಚೆನ್ನಾಗಿ ಸುರಿದುದರಿಂದ ಜನರೆಲ್ಲ ಹೊಲಗಳಲ್ಲಿ ಬಿತ್ತಿಗೆ, ಇತರ ಕೆಲಸಗಳಲ್ಲಿ ಮಗ್ನರಾಗಿದ್ದರು. ಅಂಥ ಒಂದು ದಿನ ಬೆಳಿಗ್ಗೆ ಶೆಕೂಬಾ ನನ್ನ ಕಡೆ ಬಂದ. ನಾನು ಮತ್ತು ಆಯುಬೂ ಏನೊ ಮಾತಾಡುತ್ತ ಕುಳಿತಿದ್ದೆವು. ನಿಂತುಕೊಂಡೇ ಶೆಕೂಬಾ ಹೇಳಿದ.

"ಮಾಸ್ತರಾ, ನನಗೊಂದು ಎತ್ತು ನೋಡಿ ಕೊಡಲ್ಲಾ ! ಬಿತ್ತೋದು ಹರಕತ್ ಆಗೇತಿ."

ಶಾಲಾ ಮಾಸ್ತರನ ಹತ್ತಿರ ಎತ್ತು ಎಲ್ಲಿಂದ ಬಂದೀತು ? ಹಾಗೆಂದು ನಾನು ಅವನಿಗೆ ಮನವರಿಕೆ ಮಾಡಿಕೊಟ್ಟಾಗಲೂ ಅವನು ನನ್ನನ್ನು ಬಿಡಲೊಲ್ಲ.

"ನನ್ನದೊಂದು ಎತ್ತು ಸತ್ತಿತು. ಈಗ ಇನ್ನೊಂದು ಸಿಕ್ಕರ ಉತ್ತು ಬಿತ್ತಲಿಕ್ಕೆ ಆಗತೇತಿ. ನೀ ಯಾರ್ನರೆ ಕೇಳಿ ಕೊಡಿಸು !"

"ಹೌದೊ, ನಾ ಯಾರ್ನ ಕೇಳಬೇಕಂತೀ ? ನೀ ಕೇಳಲ್ಲ."

"ನಾ ಎಲ್ಲಾರ್ನೂ ಕೇಳಿದೆ, ಯೆಲ್ಲಾರಿಗೂ ಅವರವರದು ಬಿತ್ತೋದೈತಿ."

"ಮತ್ತೆ, ಹಾಂಗಿದ್ರ ನಾ ಹೆಂಗ ಮಾಡಲ್ಯೋ ?

"ಯಾನರ ಮಾಡೊ ಯಪ್ಪಾ. ಇಡೀ ಊರೆಲ್ಲಾ ನಿನ್ನ ನೆನಸ್ತೈತಿ. ಮಾಸ್ತರಾ, ಎಲ್ಲಾರ ಯಾಳೇನೂ [ವೇಳೆ] ಸಂಭಾಳಸ್ತಾನ ಅಂತ. ಮತ್ತ ನನಗೊಬ್ಬಗ ಯಾಕ ಹೀಂಗ ಮಾಡತೀ ?"

ಇಷ್ಟರ ವರೆಗೆ ಸುಮ್ಮನಿದ್ದ ಆಯುಬೂನಿಗೆ ಈ ಮೊಂಡತನ ತಡೆಯಲಾಗಲಿಲ್ಲ. "ಏನಲೇ ಶೆಕೂಬಾ, ತೆಲಿಗಿಲಿ ಸಮಾ ಐತ್ಯೋ ಇಲ್ಲೊ ?

ಅಲ್ಲಲೇ, ಮಾಸ್ತರ ಏನ ಒಕ್ಕಲತನಾ ಮಾಡತಾನೇನು ? ಏನು ಎತ್ತಿನ ಯಾಪಾರ ಮಾಡತಾನಂತ ತಿಳಿದೀಯೋ ? ಅಂವಾ ಎಲ್ಲೀದ ಕೊಡಸಬೇಕು, ಹೋಗು ಸುಮಕಾಕ" ಎಂದು ಗದರಿಸಿದನು.

ಶೆಕೂಬಾನ ಬಗ್ಗೆ ನನಗೆ ಕನಿಕರವುಂಟಾದರೂ ನಾನು ಏನೂ ಮಾಡುವ ಹಾಗಿರಲಿಲ್ಲ. ೨-೩ ದಿನ ಕಳೆದರೂ ಶೆಕೂಬಾಗೆ ಯಾರೂ ಕಡಿಮೆ ಬಿದ್ದ ಎತ್ತನ್ನು ಕೊಟ್ಟಿರಲಿಲ್ಲವೆಂದು ತಿಳಿಯಬಂತು. ಆದರೆ ಮಾರನೆ ದಿನ ಸಂಜೆ ಅವನ ಎರಡು ಎಕರೆ ಗದ್ದೆ ಉತ್ತು ಬಿತ್ತುವುದು ಮುಗಿದಿದ್ದಿತು ! ನನಗೆ ಆಶ್ಚರ್ಯವಾಯಿತು. ಆ ದಿನ ಸಂಜೆಗೆ ಶಾಲೆಯಿಂದ ಎಲ್ಲ ಹುಡುಗರು ಹೋದ ಮೇಲೆ, ಕುತೂಹಲದಿಂದ ಶೆಕೂಬಾನ ಮನೆಗೆ ಹೋಗಿ, ಬಾಗಿಲಲ್ಲಿ ನಿಂತೆ. ಚಿಮಣಿಯ ಮಂದಪ್ರಕಾಶದಲ್ಲಿ ಕಂಡ ಒಳಗಿನ ದೃಶ್ಯದಿಂದ ನನಗೆ ಎಲ್ಲವೂ ಅರ್ಥವಾಯಿತು. ಶೆಕೂಬಾನ ಹೆಂಡತಿ ಗೋಡೆಗೆ ಹತ್ತಿ ಡಬ್ಬು ಮಲಗಿದ್ದಳು. ಶೆಕೂಬಾ ಆಕೆಯ ಕುತ್ತಿಗೆಯ ಕೆಳಗಿನ ಬೆನ್ನಿನ ಭಾಗವನ್ನು ಮೆಲ್ಲನೆ ಹಗುರಾಗಿ ತುಳಿಯುತ್ತಿದ್ದನು. ಅರ್ಥಾತ್ ಅವನ ಹೆಂಡತಿಯೇ ಎತ್ತು ಆಗಿ ಹೊಲ ಉತ್ತುವುದಕ್ಕೆ ನೆರವಾಗಿದ್ದಳು !

[೫]

ಪ್ರತಿ ಶನಿವಾರ ಶಾಲೆ ಮುಗಿದೊಡನೆ ನಾನು ನಮ್ಮೂರತ್ತ ಹೊರಡುತ್ತಿದ್ದೆ. ಸೋಮವಾರ ಬೆಳಿಗ್ಗೆ ಬರುತ್ತಿದ್ದೆ. ತಿರುಗಿ ಬರುವಾಗ, ನನ್ನ ತಾಯಿ ೨-೩ ದಿನ ಸಾಲುವಷ್ಟು ರೊಟ್ಟಿ ಮಾಡಿಕೊಡುತ್ತಿದ್ದಳು. ಒಂದು ಸಲ ಹಾಗೆ ಬರುವಾಗ, ಬನಗರ ರಾಮಾ ಕೊಟ್ಟಿದ್ದ ೩೪೦ ರೂಪಾಯಿಗಳನ್ನು ಮುರಿಸಿ, ಬಂದ ಹಣವನ್ನು ರೊಟ್ಟಿಗಳ ಮಧ್ಯದಲ್ಲಿ ಇಟ್ಟುಕೊಂಡು ತಂದೆ. ಬೆಳಗಿನ ನಡೆದಾಟದಿಂದ ದಣಿದ ನಾನು ಆ ಸೋಮವಾರ ರಾತ್ರಿ, ರೊಟ್ಟಿಯ ಗಂಟನ್ನು ತಲೆದಿಂಬಾಗಿ ಇಟ್ಟುಕೊಂಡು ನಿದ್ರೆಹೋದೆ.

ಎಚ್ಚರವಾದಾಗ ನೋಡುತ್ತೇನೆ, ರೊಟ್ಟಿಯ ಗಂಟೇ ಇಲ್ಲ ! ಅದರ ಜೊತೆಗೆ ಆ ಹಣವೆಲ್ಲ ಮಾಯವಾಗಿದ್ದಿತು. ಅದು ಇನ್ನೊಬ್ಬರದು. ನಾನು ರಾಮಾ ಬನಗರನ ವಿಶ್ವಾಸಘಾತ ಮಾಡಿದಂತಾಗಿದ್ದಿತು. ಹಣ ಕಳೆಯಿತು ಎಂದು ಹೇಳಿದರೆ ಅವನು ಎಂದಾದರೂ ನಂಬುವನೆ? ಮಾಸ್ತರಾ ಎತ್ತಿ ಹಾಕಿದ

ಎಂದೇ ತಿಳಿಯುವ. ಆ ಮೇಲೆ ಇತರರಿಗೂ ಗೊತ್ತಾದರೆ, ಇಷ್ಟು ದಿನ ನಾನು ಸಂಪಾದಿಸಿದ ಅವರ ವಿಶ್ವಾಸ ಸ್ನೇಹಗಳಿಗೆ ನೀರು ಬಿಟ್ಟಂತೆಯೇ.

ನಾನು ಹುಚ್ಚನಾದೆ. ಮುಂದೇನು ಗತಿ ಎಂಬುದು ತಿಳಿಯದೆ ಹೋಯಿತು. ನನಗೆ ಆ ಭಾಲೇಕಾರ ದಾದೂನ ಮೇಲೆ ಸಂಶಯು ಬಂದಿತು. ನನ್ನ ಮರ್ಯಾದೆ ಕಳೆಯಲು ಅವನೇ ಮಾಡಿರಬೇಕು ಎಂದೆನಿಸಿತು. ನಾನು ಬಂದಂದಿನಿಂದ ಅವನ ಪ್ರತಿಷ್ಠೆಗೆ ಭಂಗ ಬಂದಿತ್ತು. ಆದರೆ ಈ ಹಣದ ವಿಷಯದಲ್ಲಿ ನಾನು ಅವನನ್ನು ಎದುರಿಸುವದಾದರೂ ಹೇಗೆ ? ಇತ್ತ ನಾನು ರಾಮಾ ಬನಗರನ ಮುಖ ತಪ್ಪಿಸಹತ್ತಿದೆ. ಅಕಸ್ಮಾತ್ತ ಕಂಡರೆ, ನಾನು ಅವ ಸರವಿದ್ದವನಂತೆ ನಟಿಸತೊಡಗಿದೆ. ಅವನೂ ಒಂದು ದಿನವೂ ಹಣದ ಬಗ್ಗೆ ನನ್ನನ್ನು ವಿಚಾರಿಸಲಿಲ್ಲ. ಆದರೂ ನನ್ನ ಎದೆ ಹೊಡೆದುಕೊಳ್ಳುತ್ತಿತ್ತು.

ಒಂದು ದಿನ ಇದ್ದಕ್ಕಿದ್ದಂತೆ ಒಬ್ಬ ಕಪ್ಪು ಹುಡುಗಿ ೨-೩ ಸಲ ಕೋಣೆ ಯೊಳಗೆ ಇಣಿಕಿ ನೋಡತೊಡಗಿದಳು. ಆಕೆ ಒಳಗೆ ಬಾರದ್ದರಿಂದ 'ಯಾರ ವರು' ಎಂಬುದಾಗಿ ನಾನೇ ವಿಚಾರಿಸಿದೆ.

"ನಾನು ಅಂಜಾ"

"ಧಣ್ಯಾರ ಅಂಜಾ ಏನು ? ಬಾ, ಏನು ಕೆಲಸ ಇತ್ತು ?" ಎಂದೆ. ಹಸಿರು ಸೀರೆ ಉಟ್ಟು ಕೆಂಪು ಕುಬಸ ತೊಟ್ಟ ಆಕೆ ಇಪ್ಪತ್ತು ವರುಷದ ತರುಣಿ ಯಂತೆ ಕಾಣುತ್ತಿದ್ದಳು. ಆದರೆ ಅವಳಿಗಾಗಿದ್ದ ವಯಸ್ಸು ೧೫ - ೧೬ ಮಾತ್ರ. ಕೆಲಸ ಏನೆಂದು ನಾನು ಮತ್ತೆ ಮತ್ತೆ ಕೇಳಿದರೂ ಬಾಯಿಬಿಚ್ಚಿ ಹೇಳಲು ಬಡಿವಾರ ಮಾಡೇಮಾಡಿದಳು. ಕೊನೆಗೆ "ಮಾಸ್ತರ, ಇನ್ನ ತಾಲೂಕಿಗೆ ಯಾವಾಗ ಹೋಗುದೈತಿ ? " ಎಂದು ಕೇಳಿದಳು.

'ನಾಳೆ' ಎಂದು ಹೇಳಿದಾಗ, ಮುರುಕ ಮಾಡುತ್ತ "ನಂದೊಂದು, ಕುಬಸಾ ಹೊಲಿಸಿಕೊಂಡು ಬರಬೇಕಿತ್ತು" ಎಂದವಳೇ ಹೊಸ ಖಣವೊಂದನ್ನೂ ಅಳತೆಗೆಂದು ತನ್ನದೊಂದು ಹಳೆಯ ಕುಬುಸವನ್ನೂ ನನ್ನ ಮುಂದಿಟ್ಟಳು.

"ಕದ್ದು ಹೊಲಿಸಿಗೊಳ್ಳಾಕ ಹತ್ತೀನಿ, ನಮ್ಮ ಮುದುಕಗ ಹೇಳಬಾರದು ಆ೦. ಮತ್ತ ದಿನಗೂಲಿ ಮಾಡಿ ರೊಕ್ಕಾ ಕೂಡಿಸಿದ್ದೆ. ಆದರದು ಈ

ಖಣ. ಹೊಲಿಸಿ ತಂದ ಮ್ಯಾಲೆ ಕೂಲೀ ಕೊಡತೀನಿ, ಅಂ" ಎಂದವಳೇ ನನ್ನ ಉತ್ತರದ ದಾರೀ ಕಾಯದೇ ಹೋಗಿಬಿಟ್ಟಳು.

ಊರಿಗೆ ಹೋಗಿ, ಹಣ ಕಳೆದ ವಿಷಯವನ್ನು ಮನೆಯಲ್ಲಿ ತಿಳಿಸಿದಾಗ ನನ್ನ ತಂದೆ ಸ್ವಾಭಾವಿಕವಾಗಿಯೆ ಸಿಟ್ಟಿಗೆದ್ದರು. ಕೊನೆಯಲ್ಲಿ "ಕಳೆದ ಹಣ ವನ್ನು ನಮಗೆ ಭರತಿ ಹಾಕುವದಂತೂ ಸಾಧ್ಯವಿಲ್ಲ. ಅದರ ಮಾಲಿಕನಿಗೆ ಸ್ಪಷ್ಟ ಹೇಳಿಬಿಡು, ಕಳೆದಿದೆ ಅಂತ. ಕಳ್ಳರನ್ನು ಹಿಡಿಯಲಿಕ್ಕೆ ಪ್ರಯತ್ನಿ ಸೋಣ ಅಂತ ಹೇಳು. ಆಗೂ ಅವನು ತಕರಾರು ಮಾಡಿದರೆ, ನೀನು ಸರ ಕಾರೀ ನೌಕರನಿದ್ದಿ, ಹಣ ದೋಚುವವನಲ್ಲ ಎಂದು ಹೇಳಿ, ಪ್ರಸಂಗ ಬಂದರೆ ಪೋಲೀಸರಿಗೆ ವರದಿ ಕೊಡು."

ಆದರೆ ಆ ಹಳ್ಳಿಗರ ಸ್ವಭಾವವನ್ನು ತಿಳಿದಿದ್ದ ನನಗೆ ಈ ಮಾರ್ಗ ಫಲ ಕಾರಿಯಾದೀತೆಂದು ಅನಿಸಲಿಲ್ಲ. ಸಂಜೆ ಗೆಳೆಯರಲ್ಲಿ ಸಾಲ ಎತ್ತಲು ಹೊರಟೆ, ಅಷ್ಟು ದೊಡ್ಡ ಮೊತ್ತದ ಹಣದಲ್ಲಿ ಕಿಂಚಿತ್ತಾದರೂ ಕೂಡಿಸಲು ನಾನು ಸಮರ್ಥನಾಗಲಿಲ್ಲ. ರಾತ್ರಿ ಅದೇ ಚಿಂತೆಯಲ್ಲಿ ನಾನು ಹಾಸಿಗೆಯ ಮೇಲೆ ಹಾಗೇ ಹೊರಳಾಡುತ್ತಿದ್ದುದು ನನ್ನ ತಾಯಿಗೆ ಗೊತ್ತಾಯಿತೇನೋ. ಆಕೆ ಹತ್ತಿರ ಬಂದು "ಯಾಕ ರಾಜಾ, ನಿದ್ದೆ ಹತ್ತವಲ್ಲದೇನು ? ಚಿಂತೆ ಮಾಡ ಬೇಡ. ಹಣದ ಮಾಲೀಕನಿಗೆ ಒಮ್ಮೆ ಸಮಾಧಾನದಿಂದ ಹೇಳಿ ನೋಡು. ಅವನು ಎಷ್ಟೂ ಕೇಳದೆ, ಹಟ ಮಾಡಿದರೆ, ನನ್ನ ತವರಿನಿಂದ ನನ್ನ ಪಾಲಿಗೆ ಬಂದ ಆ ಮನೆಯಿದೆಯಲ್ಲ; ಅದನ್ನು ಮಾರಿ ಬಿಡೋಣವಂತೆ. ೫೦೦ ರೂ. ಗಳಿಗೇನೂ ಕಡಿಮೆಯಿಲ್ಲ. ಆ ಕುರುಬರವನಿಗೆ ಕೊಟ್ಟು ಇನ್ನೂ ಉಳಿಯು ವದು" ಎಂದಳು.

ನನ್ನ ತಾಯಿಯ ಮಾತಿನಿಂದ ನನಗೆ ಆದ ಸಮಾಧಾನ ಅಷ್ಟಿಷ್ಟಲ್ಲ. ಬನಗರವಾಡಿಗೆ ಬಂದ ಮರುದಿನವೆ, ಧಣಿಯ ಮುಂದೆ ಈ ವಿಷಯ ಪ್ರಸ್ತಾ ಪಿಸಬೇಕೆಂದು ನಿರ್ಧರಿಸಿದೆ. ಆಯುಬೂನಿಂದ ಅವನಿಗೆ ಹೇಳಿ ಕಳುಹಿದೆ. ಆದರೆ ಆಯುಬೂ ಮುಖ ದಪ್ಪ ಮಾಡಿಕೊಂಡು ಹಾಗೇ ಬಂದ. 'ಧಣಿ ಬರುವು ದಿಲ್ಲವಂತೆ. ಸವುಡಾದಾಗ ಬಂದೇನು ಅಂತ ನಿನ್ನ ಮಾಸ್ತರಗ ಹೇಳಹೋಗು' ಎಂಬ ಧಣಿಯ ಮಾತನ್ನು ಕೇಳಿ ನನಗೆ ಅತೀವ ದಿಗಿಲಾಯಿತು. ಸದಾ

ಕಾಲವೂ 'ಮಾಸ್ತರಾ, ಮಾಸ್ತರಾ.' ಎಂದು ಕಕ್ಕುಲಾತಿಯಿಂದ ಮಾತಾಡುತ್ತ ಬರುತ್ತಿದ್ದ ಮುದುಕ ಇಂದೇಕೆ ಸಿಟ್ಟಿಗೆದ್ದಿದ್ದಾನೆ ಎಂಬುದು ತಿಳಿಯದೆ ಹೋಯಿತು.

ಕೊನೆಗೆ ಆ ರಾತ್ರಿ ನಾನೇ ಮುದುಕನ ಮನೆಗೆ ಹೋದೆ. ಅಂಜಾ ಒಲೆಯ ಮುಂದೆ ಕುಳಿತು ರೊಟ್ಟಿ ಮಾಡುತ್ತಿದ್ದಳು. ಮುದುಕ ಬದಿಯ ಗೋಡೆಗೆ ಒರಗಿ ಕುಳಿತಿದ್ದವ, ನಾನು ಒಳಗೆ ಹೋಗಿ ನಿಂತರೂ 'ಬಾ, ಕೂಡು' ಎಂದೆನ್ನಲೇ ಇಲ್ಲ. ನನಗೆ ಹಿಡಿದುಬಿಟ್ಟಂತಾಯಿತು. ನಿರ್ವಾಹವಿಲ್ಲದೆ ನಾನೇ ಹೇಳಿದೆ, "ನಿಮ್ಮ ಜೊತೆ ಸ್ವಲ್ಪ ಮಾತನಾಡುವದಿತ್ತು ಒಂದು ಅಗತ್ಯದ ಕೆಲಸದ ಬಗ್ಗೆ."

ಅದುವರೆಗಿನ ಮೌನವನ್ನು ಮುರಿದು ಮುದುಕನು "ನೀ ಸುಮ್ನ ಹೋಗಪಾ. ನಾ ನಿನ್ನದೇನೂ ಕೇಳೂದಿಲ್ಲಾ !" ಎಂದು ನುಡಿದು ತಾನೇ ಮನೆ ಬಿಟ್ಟು ಕತ್ತಲೆಯಲ್ಲಿ ಹೊರಬಿದ್ದ.

ನನಗೂ ಸಿಟ್ಟು ಬಂತು. ನನ್ನದೇನೂ ತಪ್ಪಿಲ್ಲದೆ, ಅಥವಾ ಕಾರಣ ವೇನೆಂಬುದನ್ನು ಹೇಳದೇ ಹೀಗೆ ನಡೆದುಕೊಳ್ಳುವುದೇ ಎಂದು. ಇನ್ನು ನಾನೂ ಹೊರಹೊರಡುವಷ್ಟರಲ್ಲಿ, ಅಂಜಾ ಓಡಿ ಬಂದವಳೇ "ಆ ಅರಿಷ್ಟ ದಾದೂ ಏನೋ ಚಾಡಿ ಹೇಳಿದ್ದಾನೆ. ಅದಕ್ಕೇ ಅಜ್ಜಗ ಸಿಟ್ಟು" ಎಂದು ಪಿಸುಗುಟ್ಟಿದಳು. ಆ ಬೆಳೆದ ಹುಡುಗಿಯೊಡನೆ ಯಾಕೆ, ಏನು ಎಂದು ವಿವರ ಗಳನ್ನು ಕೇಳುವುದು ತರವಲ್ಲೆಂದು ಅಲ್ಲಿಂದ ಹೊರಬಿದ್ದು ಕೋಣೆಯ ಕಡೆಗೆ ಬಂದೆ. ಅಲ್ಲಿಯೆ ಇದ್ದ ಆಯುಬೂನಿಗೆ ನಡೆದ ಸಂಗತಿಯನ್ನೂ ದಾದೂನ ಚಾಡಿಯ ಬಗ್ಗೆಯೂ ಹೇಳಿದೆ. "ಕರೇವೈತ್ರಿ. ದಾದೂಗೆ ನಿಮ್ಮ ಮ್ಯಾಲೆ ಬಾಳ ಸಿಟ್ಟು. ನೀವು ಬಂದಾಗಿನಿಂದ ಅವನ ಜಬರು ಕಡಮಿ ಆತಲ್ಲಲಾ, ಊರಾಗ".

ಅದನ್ನು ಕೇಳಿ ನನಗೆ ವ್ಯಸನವೂ ಹೆದರಿಕೆಯೂ ಉಕ್ಕಿ ಬಂದವು. ನಿಜ ವಾಗಿ ನೋಡಿದರೆ ಅವನಿಗೆ ನಾನು ಯಾವ ಅನ್ಯಾಯವನ್ನೂ ಮಾಡಿರಲಿಲ್ಲ. ಊರವರಲ್ಲಿ ನನ್ನ ಮೇಲೆ ವಿಶ್ವಾಸ ಬೆಳೆಯುವದಕ್ಕಿಂತ ಮುಂಚೆಯೇ ನನ್ನ ಮೇಲೆ, ನಾ ಊರಿಂದ ಬಂದ ದಿನವೇ ನನ್ನ ಮೇಲೆ ಅಕ್ಕಸಗೊಂಡು

ಹೋಗಿದ್ದನಲ್ಲ. ಬಹುಶಃ ಅವನ ಹಿಂದಿನ ಜನ್ಮದಲ್ಲಿ ಓರ್ವ ಮಾಸ್ತರನು ಕೇಡು ಅವನಿಗೆ ಬಗೆದಿದ್ದನೊ, ಏನು ನನ್ನದೇ ಪುರಾಕೃತ ಕರ್ಮವೊ ಎಂದು ಚಿಂತಿಸಿದೆ. ಹಣ ಕಳೆದುದರ ಜೊತೆಗೆ, ಈ ಹೊಸ ವಿಪತ್ತು ಬಂದೊದಗಿತಲ್ಲ. ಮೇಲೆ ಕಾರಭಾರಿಯೂ ದೂರವಾಗಿ, ಆ ಊರಲ್ಲಿ ನಾನು ಅದೇ ಗಳಿಸಿದ್ದ ವಿಶ್ವಾಸವೆಲ್ಲ ಹಾರಿ ಹೋಗುವುದು ಖಂಡಿತ...... ಎಂಬ ದುಗುಡದಿಂದ, ಒಲ್ಲದ ಮನದಿಂದ ರೊಟ್ಟಿಯ ಗಂಟನ್ನು ಬಿಚ್ಚಿ ತಿನ್ನತೊಡಗಿದ್ದೆ. "ಮಾಸ್ತರs, ಒಬ್ಬರೇ ಅದೀರೇನು?... ಆಗಲಿ ಊಟಾ. ಆ ಮೇಲೆ ಬರ್ತೀನಿ" ಎಂಬುದಾಗಿ ಅನಂದಾ ರಾಮೋಶಿಯ ದನಿ ಕೇಳಿತು, "ಇರಲಿ ಬಾ, ಊಟ ಮುಗಿಯಲಿಕ್ಕೇ ಬಂದಿದೆ" ಎಂದೆ.

ಆನಂದಾ ಒಳಗೆ ಬಂದವನೇ ಕೋಣೆಯ ಬಾಗಿಲನ್ನು ಇಕ್ಕಿದ್ದ.

"ಮಾಸ್ತರ, ನೀವು ದುಡ್ಡು ಕಳಕೊಂಡೀರೇನು?" ಎಂದು ಕೇಳಿದ. ನನಗೆ ಗಾಬರಿಯಾಯಿತು. ನಾನು ಈ ವಿಷಯವನ್ನು ಚೆನ್ನಾಗಿ ಬಚ್ಚಿಇಟ್ಟಿದ್ದೆ. ಇವನಿಗೆ ತಿಳಿಯಿತಾದರೂ ಹೇಗೆ? ಇನ್ನು ಯಾರು ಯಾರಿಗೆ ತಿಳಿದು, ಹಗರಣವಾಗಿದೆಯೋ? ನನ್ನ ಮರ್ಯಾದೆ ಬೀದಿಗೆ ಬಂದ ಹಾಗೆಯೆ ... ಎಂದು ಕಕ್ಕಾವಿಕ್ಕಿಯಾದೆ.

"ಹೌದು. ಆದರೆ ನಿನಗೆ ಹೇಗೆ ಗೊತ್ತಾಯಿತು?" ಎಂದು ತೊದಲಿದೆ.

"ನನಗೆ ಗೊತ್ತು"

"ಹೇಗೆ?"

"ನಾನೇ ಅದನ್ನು ಒಯ್ದಿದ್ದೆ!"

ನನಗೆ ದಿಗ್ಭ್ರಮೆಯೆ ಆಗಿದ್ದಿತು–ಆನಂದಾ ತನ್ನ ಧೋತರ ಗಂಟಿನಿಂದ ಹಣದ ಗಂಟನ್ನು ಮುಂದಿಟ್ಟ. "ನಿಮ್ಮ ಹಣ ಹಾಂಗೇ ವಾಪಸು ತಂದೇನಿ ಮಾಸ್ತರ. ಎಣಿಸಿ ನೋಡ್ರಿ. ಬರೇ ಮೂರು ರೂಪಾಯಿ ಹತ್ತು ಆಣೇ ನಾ ತಿಂದೇನಿ, ಅದರಾಗಿಂದು. ಅವನ್ನ ಹೊಳ್ಳಿ ಕೊಡುವದಿಲ್ಲ."

ನನಗೆ ದೇವರೇ ಆನಂದನ ರೂಪದಲ್ಲಿ ಆ ಹಣವನ್ನು ಕಳಿಸಿದನೆಂಬಷ್ಟು ಸಂತೋಷ ಉಕ್ಕಿ ಬಂತು. ಕೂಡಲೇ ಅದನ್ನು ಎಳೆದುಕೊಂಡು ಎದೆಗೊತ್ತಿ

ಕೊಂಡೆ. ಅದರ ಭಾರವೇ ಅನಿಸದಷ್ಟು ಹಗುರಾಗಿದ್ದಿತು ಅದು – ನನ್ನ ಕೈಯಲ್ಲಿ.

"ಆನಂದಾ, ನಿನಗೆ ಹೇಗೆ ಸಿಕ್ಕಿತು ? ಯಾಕ ತಗೊಂಡಿ ?"

ದೇವವಾಣಿ ನುಡಿಯಿತು, "ಖಂಡೋಬನಾಣೆ ಮಾಸ್ತರ, ನಿಮ್ಮರೊಕ್ಕಾ ಕದೀಲಿಕ್ಕೆ ನಾ ಬಂದಿದ್ದಿಲ್ಲ. ರೊಟ್ಟಿ ಕೇಳ್ಲಿಕ್ಕಂತ ಬಂದಿದ್ದೆ. ನಿಮಂಗ ನಿದ್ದಿ ಹತ್ತಿತ್ತು. ಕದಕ್ಕ ಹೊರಗ ಅದನ್ನು ತಗೊಂಡ್ನಿ. ಬಾಳ ಅದ್ರ, ನಾಯಿ ಒಯ್ದೀತಿ ಅಂತ ಮಾಸ್ತರ ತಿಳಿತಾನು ಎಂದು ಮನೀಗೆ ತೊಗೊಂಡು ಹೋದೆ. ಬಿಚ್ಚಿ ನೋಡಿದೆ, ರೂಪಾಯಿ ಕಂಡವು ! ಎಂಟು ದಿನಾ ಹಾಂಗೇ ಇಟ್ಟೆ. ಮನಸಿನ್ಯಾಗ ಅನಸಾಕ ಹತ್ತ್ಯು, "ನಾವು ರಾಮೋಶಿಗಳು, ಅಜ್ಜಮುತ್ತಜ್ಜನ ಕಾಲದಿಂದ ಕಳವು ಮಾಡೇ ಹೊಟ್ಟೀ ತುಂಬಿಕೊಳ್ಳೋವರು. ಆದರ ನಮ್ಮ ಮಾಸ್ತರನ ದುಡ್ಡು ಯಾಕ ತಗೋಬೇಕು ? ಅಂವ ಏನು ಜಮೀನುದಾರನs? ಸಾವಕಾರನs... ಅಂತ ಹೇಳಿ ತಗೊಂಡು ಬಂದ್ನಿ."

ಅವನ ಈ ಪಶ್ಚಾತ್ತಾಪದ ಬಗ್ಗೆ ನನಗೇನು ನಿಜವೆನಿಸಲಿಲ್ಲ. ಅಷ್ಟು ಹಣವನ್ನು ಗುಪ್ತ ರೀತಿಯಿಂದ ಬಳಸುವುದು, ಅಥವಾ ಮುಚ್ಚಿ ಇಡುವುದು ದುಸ್ತರವೆಂದು ಅವನಿಗೆ ಕಂಡಿರಬೇಕು. ಇತ್ತ ನನ್ನ ಸಂತಾಪ ನೆತ್ತಿಗೇರಿತು. ಈ ಹಣಕ್ಕಾಗಿ ಒಂದು ವಾರ ಅದೆಷ್ಟೊಂದು, ಪಡಬಾರದ ಯಾತನೆ ಅನುಭವಿಸಿದ್ದೆನಲ್ಲ.

"ಶ್ಯಾಣ್ಯಾ ಇದ್ದೀ ಹೋಗು. ನಿನ್ನ ಮುಸುಡಿ ನನಗೆ ತೋರಸಬ್ಯಾಡಾ. ಹೂ-ಹೊರಡು" ಎಂದು ಗದ್ದರಿಸಿದೆ. ಆನಂದಾ ಕಿವಿಗೇರಿಸಿದ್ದ ಕೊರೆ ಬೀಡಿಯನ್ನು ನನ್ನ ಚಿಮಣಿಗೇ ಹಚ್ಚಿಕೊಂಡು ಹೊರಬಿದ್ದನು.

ಒಂದು ಕ್ಷಣವೂ ತಡಮಾಡದೇ ನಾನು ರಾಮಾ ಬನಗರನ ಮನೆಗೆ ಹೋಗಿ, ಅವನ ಮುಂದೆ ಹಣವನ್ನಿರಿಸಿದೆ. ಅದಕ್ಕೆ ಅವನು "ಏನು ಆವಸರ? ನಿಮ್ಮ ತಾವ (ಹತ್ತಿರ) ಇದ್ರ, ನನ್ನ ತಾವನೇ ಇದ್ದಂಗ ಅಲ್ಲ" ಎಂದ !

[೬]

ಸುಗ್ಗಿಯ ಕಾಲ ಮುಗಿದು ಕುರುಬ, ಒಕ್ಕಲಿಗರ ಮನೆಗಳು ದವಸ ಧಾನ್ಯದ ಕಣಜಗಳಿಂದ ತುಂಬಿದುವು. ಭೂಮಿತಾಯಿಯು ಕೊಟ್ಟ ಫಲ

ದಿಂದ ತೃಪ್ತರಾಗಿದ್ದ ಹಳ್ಳಿಗರು ತುಂಬ ಉತ್ಸಾಹದಲ್ಲಿ ಆಟ, ನೋಟ ಇತರ ವಿನೋದಗಳಲ್ಲಿ ತೊಡಗಿಕೊಂಡು ಇದ್ದರು. ನನಗೂ ಈಗ ಶಾಲೆಯ ವ್ಯಾಪ ಬೆಳೆದಿದ್ದಿತು. ಸುಗ್ಗಿಯ ಕಾಲದಲ್ಲಿ ಶಾಲೆಗೆ ಗೈರುಹಾಜರಿಯಿದ್ದ ಹುಡುಗ ರನ್ನು ಪುನಃ ಕರೆತರುವಲ್ಲಿ ಆಯುಬೂ, ರಾಮಾ ಮತ್ತು ಆನಂದಾ ತುಂಬಾ ನೆರವಾದರು. ಊರವರಾದರೂ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸುವ ವಿಚಾರದಲ್ಲಿ ಅನುಕೂಲರಾಗೇ ಇದ್ದರು. ಶಿಕ್ಷಣ ಖಾತೆಯ ಅಧಿಕಾರಿಗಳು ಆಗಾಗ ಬಂದು ಶಾಲೆಯನ್ನು ನೋಡಿಕೊಂಡು ಹೋಗುತ್ತಿದ್ದರು. ಅಂತೂ ಊರಲ್ಲಿ ಶಾಲೆ ಮತ್ತು ನಾನು ಪ್ರತಿಷ್ಠೆಯ ಗುರುತಾಗಿ ಇದ್ದೆವು.

ಒಮ್ಮೆ ಪಾಠ ಹೇಳುತ್ತಿದ್ದಾಗ, ನನ್ನ ಪಟ್ಟದ ಶಿಷ್ಯ 'ಸತಾ' ಒಬ್ಬನೇ ತೋಳವೊಂದನ್ನು ಕೊಂದು ವಿಕ್ರಮವನ್ನು ಸ್ಥಾಪಿಸಿದನೆಂದು ಇತರ ಹುಡು ಗರು ವರದಿ ತಂದರು. ಊರಲ್ಲಿ ಎಲ್ಲರ ಬಾಯಲ್ಲೂ ಅದೇ ಮಾತೇ.

ಸತಾನ ತಂದೆ ಬೀರಾ, ಬೇರೆ ಊರಿಗೆ ಹೋಗಿದ್ದನಾದ್ದರಿಂದ ಅಂದು ಸತಾ ಕುರಿ ಮಂದೆಯನ್ನು ಕಟ್ಟಿಕೊಂಡು ಅಡವಿಗೆ ಹೋದನು. ತಿರುಗಿ ಬರುವಾಗ ತೋಳವೊಂದು ಹಿಂಬದಿಯಿಂದ ಬಂದು, ಹಿಂಡಿನಿಂದ ಹಿಂದುಳಿದ ಕುರಿಯನ್ನು ಕಚ್ಚಿಕೊಂಡು ಓಡಿತಂತೆ. ಆಗ ಸತಾನ ನಾಯಿಯು ಕೂಡಲೇ ತೋಳವನ್ನು ಬೆನ್ನಟ್ಟಿತು. ತನ್ನ ಚಪ್ಪಕೊಡಲಿಯನ್ನು ಎತ್ತಿಕೊಂಡವನೆ ಸತಾನೂ ಹಿಂಬಾಲಿಸಿದ. ನಾಯಿಯು ಓಡುತ್ತ ಓಡುತ್ತ ತೋಳದ ಹತ್ತಿರ ಬಂದು, ಅದರ ಹಿಂಬದಿಯನ್ನು ಗಟ್ಟಿಯಾಗಿ ಕಚ್ಚಿ ಹಿಡಿಯಿತು. ಕೂಡಲೇ ತೋಳವು ಕುರಿಯನ್ನು ಬಿಟ್ಟುಕೊಟ್ಟಿತು. ನಾಯಿಯನ್ನು ಎದುರಿಸಲೆಂದು ತಿರುಗಿದಾಗ, ನಾಯಿಯು ತೋಳದ ಹಿಂಭಾಗವನ್ನು ಬಿಡದೆ, ಅದರ ಜೊತೆಗೆ ತಿರುಗತೊಡಗಿತು. ಎಷ್ಟೆಂದರೂ ತೋಳವು ನಾಯಿಗಿಂತ ಬಲಶಾಲಿಯಾ ದುದು. ಈ ಸೆಣಸಾಟದಲ್ಲಿ ಕೊನೆಗೊಮ್ಮೆ ಸೋತು, ನಾಯಿಯು ತನ್ನ ಹಿಡಿತವನ್ನು ಬಿಡುತ್ತಲೂ ತೋಳವು ನಾಯಿಯನ್ನು ರೊಯ್ಯನೆ ನೆಲಕ್ಕೆ ಕೆಡವಿ ತುಳಿದು ಅದರ ಗಂಟಲಿಗೆ ತನ್ನ ಬಾಯಿಯನ್ನು ಒಯ್ದಿತು. ಅಷ್ಟರಲ್ಲಿ ಸತಾ ಅಲ್ಲಿಗೆ ಬಂದುಮುಟ್ಟಿದ್ದ. ತನ್ನ ಪ್ರೀತಿಯ ನಾಯಿಯ ಆಕ್ರಂದನ ವನ್ನು ಕೇಳಿ ಮೊದಲೇ ರೊಚ್ಚಿಗೆದ್ದಿದ್ದ ಸತಾ, ಬಾಗಿದ್ದ ತೋಳದ ಕುತ್ತಿಗೆಯ ಮೇಲೆ ತನ್ನೆಲ್ಲ ಶಕ್ತಿಯನ್ನು ಉಪಯೋಗಿಸಿ, ತನ್ನ ಕೊಡಲಿಯನ್ನು ಬೀಸಿ

ದನು. ರಕ್ತ ಚಿಮ್ಮಿತು. ಅದರೊಟ್ಟಿಗೆ ತೋಳ ನೆಲಕ್ಕುರುಳಿತು. ಸತಾ ಅದರ ಮೈಮೇಲೆ ಮತ್ತೆ ನಾಲ್ಕಾರು ಏಟು ಹಾಕಿದಾಗ, ಅದರ ಜೀವ ಹೊರಟು ಹೋಗಿದ್ದಿತು. ಸತಾ ತನ್ನ ನಾಯಿಗೆ ಅಲ್ಲೇ ಮಣ್ಣು ಕೊಟ್ಟು, ಆಗಲೇ ಸತ್ತಿದ್ದ ಕುರಿಯನ್ನು ಹೆಗಲಿಗಿಟ್ಟುಕೊಂಡು ತೋಳವನ್ನು ಎಳೆದು ಕೊಂಡು ಊರಿಗೆ ಬಂದನು.

ನನ್ನ ಪ್ರೀತಿಯ ಶಿಷ್ಯ, ಸತಾ. ಅವನ ಈ ಸಾಹಸದ ಕತೆಯನ್ನು ಕೇಳಿ ನನಗೆ ತುಂಬಾ ಅಭಿಮಾನವೆನಿಸಿತು. ಅವನನ್ನು ಅಭಿನಂದಿಸಬೇಕೆಂದರೆ, ಅವನು ಒಂದು ವಾರವಾದರೂ ಶಾಲೆಗೆ ಬರಲೇ ಇಲ್ಲ. ಕೊನೆಗೆ ತಡೆಯ ಲಾರದೆ ನಾನೇ ಅವನ ಮನೆಗೆ ಹೋದೆ. ಕುರುಬರ ಮನೆಗೆ ಹೋಗುವಾಗ, ಮೊದಲು ಒದರಿಕೊಂಡೇ ಹೋಗಬೇಕು– ಆಗ ಒಳಗಿದ್ದವರು ತಮ್ಮ ಮನೆ ಮುಂದಿನ ನಾಯಿಯನ್ನು ಗದರಿಸಿದಾಗಲೇ ಒಳ ಹೋಗುವುದು ಸಾಧ್ಯ.

"ಸತಾ, ಓ ಸತಾ, ನಾಯೀನ್ನ ಸಂಬಾಳಸು" ಎಂದು ಹೇಳಿದಾಗ ಸತಾ ಮನೆಯಿಂದ ಹೊರಬಂದನು. ಆದರದಿಂದ ಕಂಬಳಿ ಹಾಸಿ ಕೂಡ್ರಿಸುತ್ತ "ನನ್ನ ನಾಯಿಯು ಸತ್ತುಹೋತು, ಗುರೂಜಿ" ಎಂದು ನುಡಿದನು.

ಹೌದಲ್ಲ ? ನನ್ನ ಬುದ್ಧಿಗೆ ಆಗ ಮರವೆಯಾಗಿದ್ದಿತು, ತೋಳವನ್ನು ಕೊಂದ ಬಗ್ಗೆ ಅವನಿಗೆ ಶಾಭಾಸ್ ಎಂದಾಗಲೂ ಅವನು ತನ್ನ ನಾಯಿಯನ್ನು ನೆನಸಿಕೊಂಡನು. ಅಷ್ಟರಲ್ಲಿ ಬೀರಾ ಒಂದು ಹಾಲಿನ ಕುಡಿಕೆಯನ್ನು ತಂದು ನನ್ನ ಮುಂದೆ ಇಟ್ಟನು. ಅದು, ಇದು ಮಾತು ಆದಮೇಲೆ "ಯಾಕೆ ಸತಾ ಶಾಲೆಗೇ ಬಂದೇ ಇಲ್ಲ ? ಬೀರಾ, ನೀ ಹೇಗೂ ಊರಿಂದ ಬಂದಿದ್ದೀಯಾ. ಕಳಿಸಿಕೊಡು" ಎಂದು ನಾನು ಹೇಳಿದೆ.

ಆಗ ಬೀರಾ "ಸತಾನ ಸಾಲೀ ಜರೂರ ಏನೈತಿ ಮಾಸ್ತರಾ. ನಾನೇ ಅವಗ ಬ್ಯಾಡಾ ಅಂತ ಹೇಳೀನಿ. ಅಂವ ಏನು ಸಣ್ಣಾವ ಅಲ್ಲ, ಈಗ ತೋಳ ವನ್ನು ಕೊಲ್ಲೂ ಅಷ್ಟು ದೊಡ್ಡವ ಆಗ್ಯಾನ. ಸಾಲೀ ಕಲಿತು ಏನು ಮಾಡೋ ದೈತಿ. ಇಲ್ಲೆ ಬೇಕಾದಷ್ಟು ಕೆಲಸ ಬಿದ್ದೈತಿ" ಎಂದನು.

ನಾನು ಎಷ್ಟೊಂದು ವಾದ ಹಾಕಿದರೂ ಅವನು ಕೇಳಲಿಲ್ಲ. ಸತಾ ಕೂಡ ಶಾಲೆಗೆ ಬರುವ ವಿಷಯದಲ್ಲಿ ಉತ್ಸುಕತೆಯನ್ನು ತೋರಲಿಲ್ಲ.

ಇದ್ದೊಬ್ಬ ಜಾಣ ಹುಡುಗನೂ ತಾಲೂಕಿನ ಶಾಲೆಗೆ ಫೈನಲ್ ಪರೀಕ್ಷೆಗೆ ಹೋಗುವುದು ತಪ್ಪಿತಲ್ಲ ಎಂದು ಹಳಹಳಿಸುತ್ತ ಹಿಂತಿರುಗಿದೆ.

[೭]

ಒಮ್ಮೆ ಕಪ್ಪಲಿ ಭಾವಿಯಲ್ಲಿ ಈಸುತ್ತ ಸ್ನಾನ ಮಾಡುತ್ತಿದ್ದಾಗ, ಮೇಲೆ ನಮ್ಮ ಧಣಿ ನಿಂತಿದ್ದು ಕಾಣಿಸಿತು. ಆ ದಿನದಿಂದ, ನನ್ನ ಅವನ ಮಾತೇ ಇರಲಿಲ್ಲ. ಅವನು ಶಾಲೆ ಕಡೆಗೆ ಬರುವದನ್ನೇ ಬಿಟ್ಟಿದ್ದ. ಮೊದಲಿಗೆ ನಾನು ಈ ವಿಷಯದಲ್ಲಿ ವ್ಯಾಕುಲನಾಗಿದ್ದರೂ ಈಚೆಗೆ ನಾನು ಅವನನ್ನು ಅಲಕ್ಷ್ಯ ಮಾಡಿದ್ದೆ, ನನಗೂ ಮರ್ಯಾದೆ ಇದೆ ತಾನೇ.

ಆದರೆ ಅಂದು ಅವನು ನನಗಾಗಿಯೆ ಕಾಯುತ್ತಿದ್ದಂತೆ ಅನಿಸಿತು. ಅಂತೂ ಮೇಲೆ ಹೋಗಿ ಮೈ ಒರೆಸಿಕೊಳ್ಳುತ್ತಿದ್ದಾಗ ಮುದುಕ ಹತ್ತಿರ ಬಂದು ತಾನೇ ಮಾತನ್ನು ಆರಂಭಿಸಿದ.

"ಒಂದೇ ಊರಾಗ ಇದ್ದು ಹೀಂಗ ಮಾತು ಬಿಡೋದು ಚೆಲೋ ಅಲ್ಲ, ಮಾಸ್ತರಾ"

"ಮಾತು ನಿಲ್ಲಿಸಿದವರು ನೀವು, ನಾನಲ್ಲ" ಎಂದೆ ನಾನು.

"ಆದರೆ ಯಾಕ ಮಾತಾಡೂದಿಲ್ಲಾ ಅಂತ ಒಮ್ಮೆರೆ ಕೇಳೀದೇನ ?"

"ಯಾತಕ್ಕ ಕೇಳಲಿ ?"

"ಯಾಕ ಮಾನ ಮುಕ್ಕ ಆಗತಿತ್ತೇನು ನಿನಗ ?" ಮುದುಕನು ಹೀಗೆ ಕೇಳಿದರೂ ತಾನಾಗಿ ಮಾತನಾಡಿಸಬಂದುದರಲ್ಲಿಯು ಅವನ ಮನಸ್ಸಿನ ಸರಳ ತನವು ಅವನ ದನಿಯಲ್ಲಿ ಚೆನ್ನಾಗಿ ವ್ಯಕ್ತವಾಯಿತು. ಅವನೇ ಮುಂದು ವರಿಸಿದ.

"ದಾದೂ ಹೇಳಿದಾ. ನೀಯೇನೊ ನಮ್ಮ ಅಂಜೀಗೆ ಕುಬಸಾ ಹೊಲಿಸಿ ಕೊಟ್ಟೀಯಂತಲ್ಲ. "

ಓಹೊ ! ಇದಕ್ಕಾಗಿಯೆ ಆತ ನನ್ನ ಮೇಲೆ ಸಿಟ್ಟಾಗಿದ್ದುದೊ ? ನನಗೆ ಅದರ ಸುಳಿವೇ ಹತ್ತಿರಲಿಲ್ಲ. ಮುದುಕನು ಮುಂದುವರಿದನು :

"ಅಂವಾ ಆಣೇ ಮಾಡಿ ಹೇಳಿದಾ. ನೀ ಕುಬಸಾ ಆಕಿ ಕೈಯಾಗ ಕೊಟ್ಟದ್ದು, ಆಕಿ ನಕ್ಕದ್ದು ಸ್ವತಾ ನೋಡೇನಿ ಅಂತ, ಮನೀಗೆ ಬಂದು

ಅಂಜೀನ್ನ ರಪಾರಪಾ ಬಡದೆ. ನಿನ್ನ ಮ್ಯಾಲೆ ಕಣ್ಣು ಇಟ್ಟೆ. ಆದರೆ ಈಟು ದಿವಸ ಆತು ನಿನ್ನಲ್ಲೆ ಅಂಥಾದೇನೂ ಕಾಣಲಿಲ್ಲ. ಅದಕ್ಕs ಕರೇ ಸಂಗತಿ ಏನು ಅಂತ ಕೇಳಾಕ ಬಂದ್ನಿ."

ನಾನು ಆ ಮುದುಕನ ಎದುರು ದಾದೂನನ್ನು ಚೆನ್ನಾಗಿ ಬೈದು "ನಾ ಕುಬಸಾ ಕೊಟ್ಟದ್ದು ಖರೇ. ಆಕಿನೇ ಅರಿವಿಕೊಟ್ಟು ಹೊಲಿಸಿ ತರಲಿಕ್ಕ ಹೇಳಿದ್ಲು. ಮತ್ತು ನಿಮಗ ಹೇಳಬ್ಯಾಡಂತ ಕರಾರು ಹಾಕಿದ್ಲು. ಬೇಕಾರ ಆಕಿನ್ನ ಕರಿಸಿ ಕೇಳ್ರಲಾ. ನನ್ನ ಇವರಿಗೇ ಆಗಿ ಬಿಡಲಿ. ನಾ ಅಂಥಾ ಹಲ್ಕಾ ಮನಷ್ಯಾ ಅಲ್ಲ ತಿಳೀತ್ಯs. ನೀವು ಮುಂದೂ ನನ್ನ ಸಂಗತೀ ಮಾತಾಡೂದು ಬ್ಯಾಡಾ. ಉಪಕಾರ ಮಾಡಲಿಕ್ಕೆ ಹೋದರೂ ಈ ಊರಾಗಿನವರಿಗೆ ಅದರ ಕಿಮ್ಮತ್ತು ಇಲ್ಲ. ನನಗೆ ಬ್ಯಾಡೇ ಬ್ಯಾಡಾ, ವರ್ಗ ಮಾಡಿಸಿಕೊಂಡು ಹೋಗತೇನಿ" ಎಂದು ಏನೇನೊ ಅಂದೆ. ಹಾಗೇ ಹೊರಟುಬಿಟ್ಟೆ.

ಕೋಣೆಗೆ ಬಂದು ಆಯುಬೂನಿಗೆ ನಡೆದ ಸಂಗತಿ ಹೇಳಿದಾಗ ಅವನು ದಾದೂನನ್ನು ಅವಾಚ್ಯ ಶಬ್ದಗಳಿಂದ ಬೈದ. ಅವನನ್ನು ಶಿಕ್ಷಿಸಲು ನನಗೆ ಹಲವಾರು ಸೂಚನೆಗಳನ್ನೂ ಮಾಡಿದ. ಆದರೆ ಆ ಬಗೆಯ ಸೇಡುತೀರಿಸಿ ಕೊಳ್ಳುವುದಕ್ಕೆ ನನ್ನ ಮನಸ್ಸು ಒಡಂಬಡಲಿಲ್ಲ.

ಮೂರು ನಾಲ್ಕು ದಿನಗಳ ನಂತರ, ಮಧ್ಯ ರಾತ್ರಿಯಲ್ಲಿ ನನಗೆ ಎಚ್ಚರವಾಯಿತು. ಚಾವಡಿಯ ಮುಂದೆ ಹತ್ತಾರು ಜನರು ನೆರೆದು, ಗಟ್ಟಿಯಾಗಿ ಮಾತನಾಡುತ್ತ ಇದ್ದರು. ಕತ್ತಲೆಯಲ್ಲಿ ಕಡ್ಡಿಯನ್ನು ಗೀರಿ, ಅಲ್ಲಿಯೆ ಮಲಗಿದ್ದ ಆಯುಬೂನನ್ನು ಬಡಿದು ಎಬ್ಬಿಸಿದೆ. ಇಬ್ಬರೂ ಅಲ್ಲಿಗೆ ಧಾವಿಸಿದೆವು.

ಅಲ್ಲಿ ಹೋಗಿ ನೋಡುವಲ್ಲಿ ದಾದೂ ನಿಶ್ಚೇಷ್ಟಿತನಾಗಿ ಬಿದ್ದಿದ್ದನು. ಯಾರೊ ದಾದೂನನ್ನು ಒಳಿತಾಗಿ ಥಳಿಸಿ ಓಡಿಬಿಟ್ಟಿದ್ದರು. ಅವನ ಮುಂದಿ ತಾಯಿ ಬೊಬ್ಬೆಯಿಡುತ್ತಿದ್ದಳು. ಬಳಿಯಲ್ಲಿ ಕಾರಭಾರಿ ಮತ್ತು ರಾಮಾ ಇದ್ದರು.

ಸುತ್ತೆಲ್ಲ ನೆರೆದ ಜನರನ್ನು ಸರಿಸಿ, ದಾದೂನನ್ನು ಹೀಗೆ ನೆಲದ ಮೇಲೆ ಬಿಡುವುದಕ್ಕಿಂತ, ಅವನನ್ನು ಮನೆಗೆ ಒಯ್ದು ಶೈತ್ಯೋಪಚಾರ ಮಾಡಿರಿ—

ಎಂದು ಸೂಚಿಸಿದೆ. ಯಾರೂ ಮುಂದೆ ಬರಲಿಲ್ಲ. ಕೊನೆಗೆ ಆನಂದಾ ರಾಮೋಶಿ ಅವನನ್ನು ಎತ್ತಿ, ಅವನ ಮನೆಗೆ ತಂದು ಮಲಗಿಸಿದನು. ದಾದೂನಿಗೆ ಎಚ್ಚರವಿರಲಿಲ್ಲ. ಅದಕ್ಕಾಗಿ ಉಪಚಾರ ನಡೆಯಿತು. ಅವನ ಹೆಂಡತಿ ಜೋರಾಗಿ ದನಿ ತೆಗೆದು ಅಳಹತ್ತಿದಾಗ,

"ಅಂವ ಏನ ಸತ್ತಾನೇನು ? ಸುಮ್ಮಕಾಗು" ಎಂದು ಕಾರಭಾರಿಯು ಬೈದು ಸುಮ್ಮನಿರಿಸಿದನು. ಅಲ್ಲಿ ನೆರೆದವರಿಗೆ, ಇದು ಹೇಗಾಯಿತು ? ಭೂತದ ಚೇಷ್ಟೆಯೊ ? ಅಥವಾ ನಿಜವಾಗಿಯೆ ಹೊಡೆದರೊ ? ಎಂಬ ದಿಗಿಲು.

ಅವನಿಗೆ ಸ್ಮೃತಿ ಬಂದಾಗ, ಬೆಳಕು ಹರಿದಿದ್ದಿತು. ಧಣಿಯು ಒದರಿ ಮಾತನಾಡಿಸುತ್ತ, "ಏನಾತು ದಾದೂ ? ಯಾರು ಹೊಡೆದರು ?" ಎಂದು ಕೇಳಿದನು.

"ರಾತ್ರಿ ಚಾವಡಿ ಹತೀಲೇ ಬರತಿದ್ದೆ. ಯಾರೊ ನನ್ನ ಮ್ಯಾಲೆ ಕಂಬಳಿ ಒಗೆದು, ನೆಲಕ್ಕೆ ಕೆಡವಿದರು. ದನಾ ಬಡಿದ್ಹಂಗ ನನ್ನ ಮೈ ಕೈಗೆ ಒಂದೇ ಸಮನೆ ಬಡಿದರು. ಬದ್ಮಾಷ್ ಸೂಳೀ ಮಕ್ಕಳು, ಯಾರು ಬಡದರು ಅಂತ ಕಾಣಿಸಲೇ ಇಲ್ಲ."

"ನಿನಗೆ ಯಾರದರ ಮ್ಯಾಲೆ ಸಂಶಯ ಐತೇನು ?" ಅಂತ ಕೇಳಿದಾಗ, ದಾದು ಮಾತಾಡಲಿಲ್ಲ. ನನ್ನ ಕಡೆ ಒಮ್ಮೆ ನೋಡಿದನು.

ನಾವೆಲ್ಲ ಹೊರಗೆ ಬಂದೆವು. ರಾಮಾ ಅಂದ, "ಹದಿನೆಂಟು ಭಾನಗಡಿ ಮನಶ್ಯಾ ಅವ, ಬ್ಯಾರೆ ಊರವರು ಯಾರೊ ಹೊಡೆದಿರಬೇಕು."

"ಅಂವಗ ಗೊತ್ತೈತಿ ಯಾರು ಹೊಡೆದಾರಂಬೂದು. ಹೇಳಾಕವಲ್ಲ." ಆಯುಬೂ ನುಡಿದ.

"ಕಳ್ಳನ ಕಾರಬಾರ ಕಳ್ಳಗೇ ಗೊತ್ತು. ಅವನ ಜೀವಾ ತಗೊಂಡಿಲ್ಲಾ, ಆತು." ಎಂದ ಕಾರಭಾರಿ.

ಮನೆಗೆ ಬಂದಕೂಡಲೇ ಆಯುಬೂನಿಗೆ ಹೇಳಿದೆ. "ದಾದೂಗ ನನ್ನ ಮ್ಯಾಲೆ ಮೊದಲೇ ಸಿಟ್ಟು ಆದ. ನಾನೇ ಮಾಡಿಸಿದೆ ಅಂತ ಅವ ಕುನಸು ಹಿಡಿದರ ?"

" ಏನ ಮಾಡತಾನ ಬಿಡ್ರಿ ? ಇನ್ನ ಆರತಿಂಗಳ ಮಟಾ ಅಂವಾ ಕಂಬಳಿ ಬಿಟ್ಟು ವ್ಯಾಲಕ ಎದ್ದರಲ್ಲs" ಎಂದು ಆಯಂಬೂ ತುಚ್ಛತೆಯಿಂದ ನುಡಿದನು.

ಹಾಗೇ ಆಯಿತು. ತಿಂಗಳು ಉರುಳಿದರೂ ದಾದೂ ನಡೆದಾಡುವ ಸ್ಥಿತಿಗೆ ಬರಲಿಲ್ಲ.

ಒಮ್ಮೆ ಸಹಜವಾಗಿಯೇ ನನ್ನ ಮನಸ್ಸಿನಲ್ಲಿ ಒಂದು ವಿಚಾರ ಮೂಡಿತು. ಈ ಹಳ್ಳಿಯಲ್ಲಿ ಒಂದು ಒಳ್ಳೇ ಗಟ್ಟಿಮುಟ್ಟಾದ ಕಟ್ಟಡ ಇರಬೇಕು ಎಂದು. ಶಾಲೆಯಂತೂ ಇದ್ದೇ ಇತ್ತು. ಅದೇ ಆಟ ಅಂಗಸಾಧನೆಗಳಿಗಾಗಿ ಒಂದು ವ್ಯಾಯಾಮ ಶಾಲೆಯಿದ್ದರೆ ನೆಟ್ಟಗೆ ಎಂದು ತೋರಿತು. ಸಂಸ್ಥಾನದ ಮಹಾರಾಜನಿಗೆ ವ್ಯಾಯಾಮ ರಂಗದಲ್ಲಿ ಆಸಕ್ತಿ ಇದ್ದಿತು. ಅದರ ಉಪ ಯೋಗವನ್ನೂ ಮಾಡಿಕೊಳ್ಳಬಹುದೆಂದು ಕಂಡಿತು.

ಆದರೆ ಊರಲ್ಲಿ ಅದು ನೆರವೇರುವ ಬಗೆ ಹೇಗೆ ? ಈ ಮಂದ್ಧ ಜನರ ತಲೆಯಲ್ಲಿ ಆ ವಿಚಾರ ಹಿಡಿಸಬೇಕಲ್ಲ. ಅವರನ್ನು ಒಪ್ಪಿಸಿದರೂ ಹಣ ಬೇಕು, ಮನೆ ಕಟ್ಟುವವರನ್ನು ಹೊರಗಿನಿಂದ ತರಬೇಕು. ಕಲ್ಲು, ಕಟ್ಟಿಗೆ ಎಲ್ಲವೂ ಬೇಕು. ಈ ಯೋಚನೆಗಳಿಂದ ಎದೆಗುಂದದೇ, ಕೆಲಸವನ್ನಂತೂ ಆರಂಭಿಸ ಬೇಕು ಎಂದುಕೊಂಡೆ. ಬೇರೆ ಊರುಗಳಲ್ಲಿ ಇಂಥ ಸಾರ್ವಜನಿಕ ಕಟ್ಟಡ ಗಳು, ಇರುವಾಗ ಇಲ್ಲಿಯೂ ಏಕೆ ಬೇಡ ? ಕಟ್ಟಡ ಸಿದ್ಧವಾದ ಮೇಲೆ, ಮುಂದೊಮ್ಮೆ " ಒಬ್ಬ ಮಾಸ್ತರ ಇದ್ದಾ. ಅವನ ಕಾಲದಲ್ಲಿ ಇದನ್ನು ಕಟ್ಟಿದ್ದು " ಎಂದು ಜನ ಹೇಳಿಯಾರಲ್ಲ......

ಒಂದು ರಾತ್ರಿ, ಚಾವಡಿಗೆ ಊರವರೆಲ್ಲರನ್ನೂ ಕರೆಯಿಸಿದೆ. ಹೊಲ ಬದುಕಿನ ಕೆಲಸವೇನೂ ಇರದ್ದರಿಂದ ಎಲ್ಲರೂ ಬಂದರು. ನಾನು ವ್ಯಾಯಾಮ ಶಾಲೆಯ ಯೋಜನೆಯನ್ನು ಅವರ ಮುಂದಿರಿಸಿದೆ. ಅಲ್ಲಲ್ಲಿ ಗುಂಜುಗುಂಜು ಮಾತು ಸುರುವಾಯಿತು. ಅವರಲ್ಲಿ ಒಬ್ಬನೆಂದ :

" ಗರಡೀಮನೆಗೆ ಹೋಗಲಾಕ ಪೋರಗೋಳು ಎಲ್ಲಿ ಅದಾವು? "

" ಶಾಲೆ ನಡೆಸುವಾಗಲೂ ಹೀಗೇ ಹೇಳತಿದ್ದಿರಿ. ಈಗ ಇದ್ದಾರಲ್ಲ. ಈಗ ಇರದಿದ್ರೂ ಮುಂದ ಗರಡೀಮನೆಗೆ ಹುಡುಗೂರು ಬಂದೇ ಬರತಾವು " ಎಂದ ಕಾರಭಾರಿ.

"ವ್ಯಾಯಾಮಕ್ಕ ಅಲ್ಲಾದ್ರೂ, ಊರಿಗೊಂದು ಇಂಥಾ ಜಾಗಾ ಇದ್ರ ಬೇಶಿ [ನೆಟ್ಟಗೆ]. ನೀವೇ ನೋಡಿರಲ್ಲ. ನಿಮ್ಮ ಕುಣಿತದ ಸಾಮಾನು ಬೇಕು ಬೇಕಾದ ಕಡೆ ಅದಾವು. ಲೇಝಿಮ್ ಒಬ್ರ ಮನ್ಯಾಗ ಇದ್ರ, ಗೆಜ್ಜಿ ಇನ್ನೊಬ್ಬರ ಮನ್ಯಾಗ. ಅಲ್ಲದs, ಸರಕಾರೀ ಅಧಿಕಾರಿಗಳು ಬಂದ್ರ ಇಳಕೊಳ್ಳಾಕ ಒಂದು ಜಾಗಾ ಅಂತ ಬೇಕಲ್ಲ."ಎಂದು ಉತ್ತೇಜಿತನಾಗಿ ಹೇಳಿದೆ. ನನ್ನ ಸೂಚನೆಯನ್ನು ಅವರು ಒಪ್ಪದಿದ್ದರೂ ಅದಕ್ಕೆ ವಿರೋಧ ಹೇಳುವವರು ಯಾರೂ ಇರಲಿಲ್ಲ. ಕೆಲವು ವಿಚಾರವಂತರು "ಆಯಿತು, ಕಟ್ಟಡ ಅರ್ಧಮರ್ಧ ಆಗಿ, ಪರ ಊರಿನವರಿಂದ ನಗಿಸಿಕೊಳ್ಳುವ ಹಾಗೆ ಆದೀತು" ಎಂದು ಭಾವಿಸಿದರು.

ಊರಿನ ಹಿರಿಯರನ್ನು ಇನ್ನೊಮ್ಮೆ ಕರೆಯಿಸಿಕೊಂಡು ಇನ್ನಷ್ಟು ವಿವರವಾಗಿ ಚರ್ಚಿಸಿ, ಹೇಗೂ ಅವರನ್ನು ಒಪ್ಪಿಸಿದೆ. ಆರು ತಿಂಗಳಲ್ಲಿ ಕೆಲಸ ಮುಗಿಯಿಸಬೇಕೆಂದೂ ಮಹಾರಾಜರನ್ನೇ ಉದ್ಘಾಟನೆಗೆ ಕರೆಯಿಸಬೇಕೆಂದೂ ನಿರ್ಣಯವಾಯಿತು. ರಾಜರು ಇದಕ್ಕಾಗಿ ಬರುವರೆಂದ ಕೂಡಲೇ ಇತರರಿಗೆ ಉತ್ಸಾಹವೇರಿತು.

ಹಳ್ಳಿಯಲ್ಲಿ ಜಾಗಕ್ಕೇನು ಕೊರತೆ ? ಎಂದು ನಾನು ಭಾವಿಸಿದ್ದೆ. ಆದರೆ ಎಲ್ಲರಿಗೆ ಅನುಕೂಲವಾದ ಮತ್ತು ಪ್ರಶಸ್ತವಿರುವ ಜಾಗವು ದೊರೆಯಲಿಲ್ಲ. ಅಂಥ ಒಂದು ಜಾಗದಲ್ಲಿ ಯಾರದೊ ಹಳೆಯ ಮನೆಯಿದ್ದಿತು. ಆ ಮನೆಯಲ್ಲಿ ವಾಸಿಸುವವರಿದ್ದಿಲ್ಲ. ಅದನ್ನು ಕಟ್ಟಿದವ ಸದ್ಯಾ ಎಂಬ ಕಿರಾಣಿ ವ್ಯಾಪಾರಿ. ಅವನು ಸತ್ತುಹೋಗಿದ್ದ. ಅವನ ವಾರಸುದಾರರು ಯಾರೂ ಇರಲಿಲ್ಲ. ನಾನು ಆ ಮನೆಯನ್ನು ಕೆಡವಿಸಿ ಅಲ್ಲಿ ವ್ಯಾಯಾಮಶಾಲೆಯನ್ನು ಕಟ್ಟಿಸಬೇಕೆಂದು ಸೂಚಿಸಿದೆ.

ಆದರೆ ಊರವರು ಒಪ್ಪಲಿಲ್ಲ. ಇನ್ನೊಬ್ಬರ ಜಾಗವನ್ನು ತಮ್ಮ ಸ್ವಂತಕ್ಕೇ ಬಳಸಿಕೊಂಡಂತೆ ಅವರಿಗೆ ಅನಿಸತೊಡಗಿತು. ಅಲ್ಲದೆ ನಾಳೆ ಅವನ ದೆವ್ವ ಬಂದು ತಮ್ಮನ್ನು ಹಿಡಿದರೆ !

ಈ ಮನೆಯನ್ನು ಕೆಡಹುವ ಕೆಲಸಕ್ಕೆ ಯಾರೂ ಮುಂದಾಗದಿದ್ದುದನ್ನು ಕಂಡು, ಒಂದು ದಿನ ನಾನೇ ಶಾಲೆಯ ಕೆಲವು ಹುಡುಗರನ್ನು ಕರೆದುಕೊಂಡು, ಕೈಯಲ್ಲಿ ಗುದ್ದಲಿ ಹಿಡಿದು, ಆ ಬೀಳಲು ಗೋಡೆಗೆ ಮೊದಲ ಏಟನ್ನು

ಹಾಕಿದೆ. ಹುಡುಗರೂ ಉತ್ಸಾಹದಿಂದ ಸಲಿಕೆಯನ್ನು ಹಿಡಿದುಕೊಂಡು ಕಲ್ಲು, ಮಣ್ಣನ್ನು ಕೆದರಿದರು. ಕೂಡಲೇ ಊರವರು ತಾವೂ ಸೇರಿಕೊಂಡರು. ಆಗಬಹುದಾದ ಕೆಟ್ಟತನದ ಜವಾಬ್ದಾರಿ ಹೇಗೂ ನನ್ನದಾಯಿತಲ್ಲ! ಒಂದೆರಡು ದಿನದಲ್ಲಿ ಸದ್ಯಾನ ಮನೆ ನಿರ್ಮಾಣವಾಗಿ ಬಯಲು ಜಾಗ ಸಿದ್ಧವಾಯಿತು.

ಅಲ್ಲಿಂದ ಬೇಕಾದದ್ದು ಕಟ್ಟಿಗೆ. ಕೆಲ ಹಿರಿಯರನ್ನು ಮುಂದಿಟ್ಟುಕೊಂಡು ಮನೆ–ಮನೆಗೆ ಹೋಗಿ, ಯೋಗ್ಯವಾದ ಕಟ್ಟಿಗೆಗಳನ್ನು ದೊರಕಿಸುವುದಕ್ಕೆ ನೋಡಿದೆವು. ಆದರೆ ಸಿಕ್ಕದ್ದು ಸ್ವಲ್ಪವೇ. ಯಾರೂ ಕೊಡಲಿಕ್ಕೆ ಮುಂದಾಗಲೊಲ್ಲರು. ಅದು ಊರ ಹಿತಕ್ಕಾಗಿ ಎಂಬ ಕಲ್ಪನೆ ಅವರಿಗೆ ಬರಲೊಲ್ಲದು. ಒಂದೊಂದು ಸಣ್ಣ ವಸ್ತು ಅಥವಾ ಕೆಲಸವಿದ್ದರೂ ಅವರಿಗೆ ಹೇಳಿ, ತಾಸುಗಟ್ಟಲೆ ಒತ್ತಾಯಮಾಡಿ, ಮಾಡಿ ನನ್ನ ತಲೆ ಸಿಡಿಯುವಂತಾಯಿತು. 'ನನ್ನ ಉಪಕಾರಕ್ಕೆ ಅಥವಾ ನನಗೆ ಕೊಟ್ಟಂತೆ ಮಾಡತಾರಲ್ಲ— ಈ ಜನ. 'ಹಾಳಾಗಲಿ, ಅವರಿಗೆ ಬೇಡವಾದದ್ದು ನನಗಾದರೂ ಏಕೆ ? ಇಲ್ಲಿಗೇ ನಿಲ್ಲಿಸಿಬಿಡುವೆ' ಎಂದು ನಮ್ಮ ಧಣಿಯೆದುರು ನಾನು ಗೋಗರೆಯುತ್ತಿದ್ದೆ. ಆಗ ಅವನೇ ಸಮಾಧಾನ ಹೇಳುವ. 'ಈಗ ಸುರು ಮಾಡಿದ್ದೈತಿ, ಮುಂಗಸಾಕಬೇಕು. ಸ್ವಲ್ಪ ದಿನಾ ಹ್ವಾದಮ್ಯಾಲೆ ತಾವs ಹಾದಿಗೆ ಬರತಾರು.'

ಕಟ್ಟಿಗೆ ಕೂಡಿಸುವ ಕೆಲಸದ ನಿಮಿತ್ತವಾಗಿ ನಾನು ಬಾಳ್ಯಾ ಬನಗರನ ಮನೆಗೆ ಹೋದೆ. ಅವನ ಅವಾರದಲ್ಲಿ ಒಂದು ಒಳ್ಳೇ ಚೆನ್ನಾಗಿ ಬೆಳೆದ ಬೇವಿನ ಮರ ಇದ್ದಿತು. ಕಟ್ಟಡದ ತೊಲೆಗಳಿಗೆ ಹೇಳಿ ಮಾಡಿಸಿದಂತಿತ್ತು. ನಾನು ಬಹುಪರಿಯಿಂದ ಹೇಳಿ ನೋಡಿದೆ. ಆತ ಒಪ್ಪಲಿಲ್ಲ. ಕೊನೆಗೆ ಕಾರಭಾರಿಯನ್ನೂ ಮತ್ತೆ ಒಬ್ಬಿಬ್ಬ ಹಿರಿಯರನ್ನೂ ಕರೆದುಕೊಂಡು ಹೋದೆ. " ನಾ ನಿನ್ನೇ ಮಾಸ್ತರಗ ಹೇಳೇನಿ, ಈ ಗಿಡಕ್ಕೆ ಕೊಡಲೀ ಹಚ್ಚುವ ಮುಂಚೆ, ನನ್ನ ತಲೀ ಹೊಡೆದೇ ತಗೊರಿ ಅಂತ. ನಿಮಗೂ ಹಂಗೆ ಹೇಳತೀನು."

"ಹಾಂಗ ಸಿಟ್ಟಾಗಬ್ಯಾಡ ಬಾಳಾ, ನಾವು ಕೇಳೋದು ಒಂದು ಗಿಡಾ, ಅದೂ ಊರಿನ ಸಲುವಾಗಿ, ಕೊಟ್ಟುಬಿಡು" ಎಂದನು ಕಾರಭಾರಿ.

"ಕೊಡೂದುಲ್ಲಾ ಅಂದ್ರ ಇಲ್ಲಾ ! ಸ್ವತಹಾ ಪಂತ ಸರಕಾರ ಬಂದ್ರೂ ನಾ ಕೊಡಾಂವ ಅಲ್ಲ "

ಕಾರಭಾರಿಗೆ ತಡೆಯುವುದಾಗಲಿಲ್ಲ. "ನಕ್ಕೀನಣ ಹಂಗರ? ನಡೀರ್‍ಯೋ ಹೋಗೋಣ" ಎಂದು ಎದ್ದು ನಿಂತು ಹೊರಡಲನುವಾದನು. ಜೊತೆಯಲ್ಲಿದ್ದ ರಾಮಣಾ ಬನಗರನಿಗೂ ಸಿಟ್ಟು ಉಕ್ಕಿ ಬಂದಿದ್ದಿತು. ಆದರೂ "ನೋಡಾ, ಬಾಳ್ಯಾ, ಇಡೀ ಊರಿನ ಯೀರದ್ದ [ವಿರುದ್ಧ] ನಿಂತಂಗ ಆದೀತು" ಎಂದು ಹೇಳಿಹೋದ.

"ಹೋಗ್ ಹೋಗೋ ನಂದ ನಾ ದುಡಕೊಂಡು ತಿನ್ನಾಕಹತ್ತಿ ಎಂಟ ವರಸ ಆತು. ಊರ ಏನು ನನಗ ಮಾಡೇತಿ? ಅದೇನೊ ಹೇಳ್ತಾರಲ್ಲ ರಂಡಿಮುಂಡಿಗೆ ಗಂಡನ ಹೆದರಿಕೆ ಹಾಕಿದಂತೆ !"

ನಾವೆಲ್ಲ ಒಂದು ಕ್ಷಣವೂ ಅಲ್ಲಿ ನಿಲ್ಲಲಿಲ್ಲ. ತುಸು ಮುಂದೆ ಬಂದ ಕೂಡಲೇ ಕಾರಭಾರಿ ಹೇಳಿದ, "ಇನ್ನ ಮ್ಯಾಲ ಬಾಳ್ಯಾನ ಸಂಗಾಟ ಯಾರೂ ಮಾತಾಡಬ್ಯಾಡ್ರಿ. ಅವನ ಕೆಲಸ ಮಾಡಬ್ಯಾಡ್ರಿ. ಅವನ ಕುರಿ ನಿಮ್ಮ ಹೊಲದಾಗ ಹಾಯಗೂಡಬ್ಯಾಡ್ರಿ."

ಈ ಬಹಿಷ್ಕಾರದ ಸುದ್ದಿ ತಡವಿಲ್ಲದೇ ಊರಲ್ಲಿ ಹಬ್ಬಿತು. ಕೂಡಲೇ ಅದರ ಪರೀಕ್ಷೆಯೂ ಆಯಿತು. ಕೆಲವೇ ದಿನಗಳಲ್ಲಿ ಬಾಳ್ಯಾ ಆಯುಬೂನಿಗೆ ಕುರಿ ಕಡಿಯುವದರ ಸಲುವಾಗಿ ಹೇಳಿ ಕಳಿಸಿದಾಗ, ಆಯುಬೂ,

"ನಾ ಬರೂದಿಲ್ಲ. ಊರು ನಿನ್ನ ಹೊರಗ ಇಟ್ಟೇತಿ" ಎಂದನು.

"ಅಲ್ಲಲೇ ಸಾಬಾ, ನೀ ಪರ ಊರಿನವ. ನಿನಗ್ಯಾಕ ಇದರ ಪಂಚೇತಿ. ನಿನಗ ಬೇಕಾದಷ್ಟು ಕಾಳು ತಗೋ ಅಲ್ಲ.

"ನಿನ್ನ ಕಾಳುಕಡಿ ಏಟ ಇದ್ರೂ ನನಗ ಬ್ಯಾಡಾ. ನಾ ಬರೂದಿಲ್ಲ."

ಆಗ ಬಾಳ್ಯಾ ೬ ಮೈಲು ದೂರದಲ್ಲಿದ್ದ ಇನ್ನೊಬ್ಬ ಕಟುಗರವನನ್ನು ಕರೆತರಬೇಕಾಯಿತು. ಅವನೂ ಹಟಕ್ಕೆ ಬಿದ್ದಿದ್ದ– ಊರವರ ಎದುರು ನಿಂತೇ ತೋರಿಸುವೆ, ಎಂದು ! ಊರವರಂತೂ ಸಿದ್ಧರಾಗೇ ಇದ್ದರು.

ನನ್ನ ಅಂದಾಜಿನಂತೆ ಕಟ್ಟಡದ ಕೆಲಸ ತೀವ್ರಗತಿಯಿಂದ ಮುಂದುವರಿಯಲೇ ಇಲ್ಲ. ಕಟ್ಟಿಗೆಯ ಎತ್ತುವಳಿಯ ನಂತರ, ಬಡಿಗತನದ ಕೆಲಸವೇ ಬಹಳಷ್ಟು ಸಮಯವನ್ನು ನುಂಗಿತು. ಒಡ್ಡರು ಒಡೆದಿಟ್ಟ ಕಲ್ಲುಗಳನ್ನು

ಊರೊಳಗೆ ಸಾಗಿಸುವುದೂ ನಿಧಾನವಾಯಿತು. ಇದ್ದಬಿದ್ದ ಎಲ್ಲ ಕೆಲಸಕ್ಕೂ ಮುಂದಾಗುತ್ತಿದ್ದ ಆಯಂಬೂ ಸೊರಗಿಹೋದನು. ರಾಮಣ ಬನಗರನ ಆಲಸ್ಯ ಹೇಳಹೆಸರಿಲ್ಲದಾಯಿತು, ಕಾರಭಾರಿಯಂತೂ ಸರಿಯೇ. ನಾನು ರಜೆಯ ದಿನ ಬಂದರೂ ಊರಿಗೆ ಹೋಗುತ್ತಿರಲಿಲ್ಲ. ಎಂಟೆಂಟು ದಿನ ಗಡ್ಡ ತೆಗೆಯದೆ ಉಂಡಾಗ ಉಂಡೆ, ಇಲ್ಲವಾದರಿಲ್ಲ ಎಂಬ ಸ್ಥಿತಿಯಲ್ಲಿದ್ದೆ. ಊರವರು ತಂತಮ್ಮ ಅನುಕೂಲದ ಪ್ರಕಾರ ನೆರವಾಗುತ್ತಿದ್ದರೂ ಕಟ್ಟಡವು ಮೇಲೇರಲೊಲ್ಲದು. 'ಮನೆ ಕಟ್ಟಿ ನೋಡು' ಎಂಬ ಗಾದೆಯ ಮಾತು ನನಗೆ ಅಕ್ಷರಶಃ ನಿಜವೆನಿಸಿತು.

ನಾನು ಅಲ್ಲಿಗೆ ಬಂದ ಮೇಲಿನ ಎರಡನೇ ಸುಗ್ಗಿಯೂ ದಾಟಿ ಹೋಯಿತು. ನಂತರದ ಬಿಡುವಿರುವ ದಿನಗಳಲ್ಲಾದರೂ ಕೆಲಸವು ಚುರುಕಿನಿಂದ ನಡೆಯಬಾರದೇನು ? ಅದರಿಂದ ಪರ ಊರವರು ನಗೆಯಾಡುವಂತಾಯಿತು. ಯಾರಿಗೆ ಬೇಕಿತ್ತು ಈ ಗರಡೀಮನಿ ಕೆಲಸ ? ಹುಡುಗರು ಅಡವಿಯಲ್ಲಿ ಬೇಕಾದರೆ ವ್ಯಾಯಾಮ ಮಾಡುತ್ತಿದ್ದರು. 'ಏನಿಲ್ಲ, ಆ ಮಾಸ್ತರಾ ಕುರುಬ ಮಂದೀನ್ನ ಮರುಳ ಮಾಡಿ, ಒಂದಿಷ್ಟು ಕಿಸೆ ತುಂಬಿಕೊಳ್ಳಲು ನೋಡುಕೊಳ್ಳುತ್ತಿದ್ದಾನೆ' ಎಂದೆನ್ನತೊಡಗಿದರು.

ಇದು ಹೀಗೇ ಬಿಟ್ಟರೆ ನಡೆಯದೆಂದು ತಿಳಿದು, ನಾನು ಶಿಕ್ಷಣದ ಖಾತೆಗೆ ಬರೆದು "ಕಟ್ಟಡದ ಕೆಲಸ ಪೂರ್ತಿಯಾಗಿದೆ. ಮಹಾರಾಜರು ನಮ್ಮ ವಾಡಿಯ ತನಕ ಆಗಮಿಸಿ ವ್ಯಾಯಾಮಶಾಲೆಯನ್ನು ಉದ್ಘಾಟಿಸುವಂತೆ ಒಪ್ಪಿಸಬೇಕು;" ಎಂದು ಪತ್ರ ಬರೆದೆ. ಹಾಗೆಂದು ಊರವರಿಗೆ ತಿಳಿಸಿದೆ. ಈ ತಿಂಗಳ ಕೊನೆಗೇ ಬರಬಹುದು ಎಂದ ಕೂಡಲೇ ಜನ ಗಜಬಜಿಸಿತು. ಕಟ್ಟಡ ಮುಗಿಯುವ ಬಗೆ ಹೇಗೆ ಎಂದು ಶಂಕೆಯೆತ್ತಿದರು. "ಆಯಿತು, ಅವರಂತೂ ಬರುತ್ತಾರೆ. ಬಂದಾಗ, ಮಹಾರಾಜ, ನಮ್ಮದು ತಪ್ಪಾಯಿತು, ಕಟ್ಟಡ ಪೂರ್ತಿಯಾಗಿಲ್ಲ, ಎಂದು ಹೇಳಿಕೊಳ್ಳಿರಿ"ಎಂದು ನುಡಿದೆ !

ಇದಾದ ಕೆಲ ದಿನಗಳಲ್ಲಿ ಸರಕಾರದಿಂದ ಉತ್ತರವೂ ಬಂತು, "ಎಪ್ರಿಲ್ ತಿಂಗಳ ೨೦ ನೇ ತಾರೀಖಿಗೆ ಮಹಾರಾಜರ ಸವಾರಿ ಚಿತ್ತೈಸುವದು" ಎಂದು. ನನ್ನ ಉಪಾಯ ಫಲಿಸಿತು ! 'ಕಟ್ಟಡ ಮುಗಿಸಬೇಕಾದರೆ ಏನು ಮಾಡಬೇಕು ?' 'ನಾನೇನು ಮಾಡಲಿ ?' ಎಂದು ಕೇಳುತ್ತ ಊರವರು ಮುಂದೆ

ಬಂದರು. ವ್ಯಾಯಾಮಶಾಲೆಯ ಗೋಡೆಗಳು ಏರಿದವು. ಗೂಟಗಳು ನಿಂತವು. ಬಾಗಿಲು, ಚೌಕಟ್ಟುಗಳು ತಯಾರಾದವು.

ಮಹಾರಾಜರ ಆಗಮನದ ಸುದ್ದಿಯು ಊರಲ್ಲಿ ಹೇಳತೀರದಷ್ಟು ಸಂಭ್ರಮವನ್ನುಂಟುಮಾಡಿತು. ಜನ್ಮದಲ್ಲಿ ಒಬ್ಬ ಕುರುಬನಾದರೂ ತಮ್ಮ ಮಹಾರಾಜನನ್ನು ಪ್ರತ್ಯಕ್ಷವಾಗಿ ನೋಡಿರಲಿಲ್ಲ. ಈಗ ಆ ರಾಜನೇ ಸಾಕ್ಷಾತ್ ಅವರ ಬಳಿಗೆ ಬರುವವನಿದ್ದಾನೆಂದರೆ! ಕುರುಬರ ಹೆಂಗಸರು ತಮ್ಮ ಮನೆಗಳಿಗೆ ಸಾರಣೆ, ಕಾರಣೆ ಮಾಡಿದರು. ಶಾಲೆಗೆ, ಚಾವಡಿಗೆ ಸುಣ್ಣ ಬಳಿಯುವುದಾಯಿತು. ಅಲ್ಲಲ್ಲಿಯ ತಿಪ್ಪೆ–ಗುಂಡಿಗಳು ಸ್ವಚ್ಛವಾದವು. ತಾಲೂಕಿನ ಅಧಿಕಾರಿಗಳು ಮೇಲಿಂದ ಮೇಲೆ ವಾಡಿಗೆ ಎಡತಾಕಿದರು. ತಾಲೂಕಿನಿಂದ ವಾಡಿಯವರೆಗಿನ ರಸ್ತೆಯ ರಿಪೇರಿಯಾಯಿತು.

[೮]

ಮರುದಿನವೇ ಉದ್ಘಾಟನ ಸಮಾರಂಭವಿದ್ದಿತು. ಆ ಸಭೆಗೆ ಬೇಕಾಗುವ ಮೇಜು, ಕುರ್ಚಿಗಳು, ಹೂವಿನ ಹಾರ ಮೊದಲಾದವುಗಳೂ ಸಿದ್ಧವಾದವು, ಆದರೇನು, ಕಟ್ಟಡದ ಮಾಳಿಗೆಯೇ ತಯಾರಾಗಿರಲಿಲ್ಲ! ನಾನು ಕಂಗೆಟ್ಟೆ.

ಆಗ ಮಧ್ಯಾಹ್ನ ೨–೩೦ ಹೊಡೆದಿತ್ತು. ನಾನು ಕಾರಭಾರಿಯ ಹತ್ತಿರ ಓಡಿದೆ. "ಊರಿನ ಮರ್ಯಾದೆ ಹೋಯಿತು ಧಣೀ. ಮಹಾರಾಜರ ಸವಾರಿ ನಾಳೆ ಬೆಳಿಗ್ಗೇನೇ ಬರುತ್ತದೆ" ಎಂದೆ.

ಮುದುಕ ಕೂಡಲೇ ಎದ್ದುನಿಂತ. "ನಡೀ, ಊರವರ್ನೆಲ್ಲಾ ಕರಿಯೋಣ. ಅಡವಿಗೆ ಹೋದವರಿಗೂ ಹೇಳಿಕಳಸೂಣು" ಎಂದು ನುಡಿದ. ಹರೆಯದವನಂತೆ ತಾನೂ ಓಡಾಡಿದ.

ಲಗುಬಗೆಯಿಂದ ಮಣ್ಣು ಕಲಸಲಾಯಿತು. ಸುಮಾರು ೭೦–೭೫ ಜನ ಕುರುಬರು, ಮಾಳಿಗೆಯೆತ್ತರದ ವರೆಗೆ ಗಳ ಕಟ್ಟಿ ನಿಂತು, ಬುಟ್ಟಿ ಬುಟ್ಟಿ ಮಣ್ಣನ್ನು ಮಾಳಿಗೆಗೆ ಏರಿಸತೊಡಗಿದರು. ಕತ್ತಲಾಗುತ್ತಲೂ ಗ್ಯಾಸುಗಳನ್ನು ತರಿಸಿದೆವು.

ಊರಲ್ಲೆಲ್ಲ ತಳಿರು–ತೋರಣ ಕಟ್ಟುವ ಕೆಲಸ ಮುಗಿಯುಬಂದಿತ್ತು. ರಾಜರನ್ನು ೨೧ ಜೋಡು ಎತ್ತುಗಳ ಮೆರವಣಿಗೆಯಲ್ಲಿ ಊರೊಳಗೆ ಕರೆ

ತರಬೇಕೆಂದು ಗೊತ್ತಾಗಿದ್ದಿತು. ಆ ಎತ್ತುಗಳನ್ನು ಒಂದೆಡೆ ಸೇರಿಸಿ, ಅವುಗಳಿಗೆ ಅಲಂಕಾರ ಮಾಡುವ ಕೆಲಸ ಇನ್ನೊಂದೆಡೆ ಸಾಗಿತ್ತು. ಊರಿಗೆ ಊರೇ ಜಾಗರವಾಗಿದ್ದು, ಜೇನ್ನೊಣಗಳಂತೆ ಸಂತತವಾಗಿ ಕಾರ್ಯನಿರತ ರಾಗಿದ್ದರು.

ಮಾಳಿಗೆಯೇರಿಸುವುದು ಮುಗಿಯುತ್ತ ಬಂದಿದೆಯೆನ್ನುವಾಗ ಮಧ್ಯ ರಾತ್ರಿ ದಾಟಿಹೋಗಿದ್ದಿತು. ಅಷ್ಟರಲ್ಲಿ ಒಂದು ಅನಾಹುತ ಸಂಭವಿಸಿತು. ಮೇಲೆ ಹತ್ತಿದ್ದ ಆಯುಬೂ ಕಾಲು ಜಾರಿ ಧೊಪ್ಪನೆ ನೆಲಕ್ಕೆ ಬಿದ್ದನು. ಆ ನೆಲವೂ ಚೂರು ಮಾಡಿದ ಕಲ್ಲುಗಳಿಂದ ತುಂಬಿಹೋಗಿದ್ದಿತು. ಜನರೆಲ್ಲ ಗಾಬರಿಯಾಗಿ ಕೆಲಸ ನಿಲ್ಲಿಸಿದರು. ನಾನು ಆಗ ಶಾಲೆಯಲ್ಲಿ ಕುಳಿತು ನಾಳಿನ ಸಭೆಯ ಇತರ ಸಿದ್ಧತೆಗಳಲ್ಲಿ ತೊಡಗಿದ್ದೆ. "ಆಯುಬೂ ಸತ್ತ !" ಎಂದು ಎಲ್ಲರೂ ತಿಳಿದರು. ಅಲ್ಲಿಯೆ ಇದ್ದ ಕಾರಭಾರಿಯು, ಗಟ್ಟಿಯಾಗಿ ಗದರಿಸುತ್ತ "ಸತ್ತರೆ ಸತ್ತ ! ಅದನ್ನು ನಾನು ನೋಡಿಕೋತೇನಿ. ನೀವ್ಯಾಕರ್‍ಯೊ ಕೆಲಸ ನಿಲ್ಲಿಸಿದ್ದು ?" ಎಂದು ಗುಡುಗಿದನು.

ಕೋಳಿ ಕೂಗುವ ಸಮಯವಾಗಿದ್ದಿತು. ಆಯುಬೂನನ್ನು ನನ್ನ ಕೋಣೆಯಲ್ಲಿ ಮಲಗಿಸಿದ್ದರು. ಅವನಿಗೆ ಎಚ್ಚರವಿರಲಿಲ್ಲ. ಎಚ್ಚರ ಬರು ವಂತೆ ತುಸು ಹೊತ್ತು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಅದಕ್ಕೂ ಹೆಚ್ಚು ಗಾಯಾಳುವಿನ ಶುಶ್ರೂಷೆ ಮಾಡಲು ವೇಳೆಯೆಲ್ಲಿದ್ದಿತು ? ವೇಳೆ ಯೊಂದಿಗೆ ನಮ್ಮ ಯುದ್ಧವೇ ನಡೆದಿದ್ದಿತು.

ಮಾಳಿಗೆಯ ಕೆಲಸ ಮುಗಿದಿದೆಯೆನ್ನುವಾಗ ಪೂರ್ಣ ಬೆಳಕು ಹರಿದಿತ್ತು. ಮೈ ತೊಳೆದು ಒಳ್ಳೆಯ ಬಟ್ಟೆ ಹಾಕಿಕೊಂಡು ಬರಲೆಂದು ಅವರೆಲ್ಲರನ್ನು ಅಟ್ಟಿದೆ. ಕೆಲ ಹುಡುಗರನ್ನು ಊರ ಹೊರಗೆ ಕಳಿಸಿ, ಮಹಾರಾಜರ ಕಾರಿನ ಸದ್ದು ಕೇಳಿದ ಕೂಡಲೇ, ಕಾಳಿಯನ್ನು ಊದಿ ನಮಗೆ ವರದಿ ಮಾಡಲೆಂದು ಸೂಚಿಸಿದೆವು.

ಸರಿಯಾಗಿ ೮-೧೫ ಗಂಟೆಗೆ ಗಿಡದ ಮೇಲೆ ಕುಳಿತಿದ್ದವನ ಕಾಳಿಯ ಸ್ವರ ಕೇಳಿಸಿತು. "ಬಂದರು,... ಬಂದೇಬಿಟ್ಟರು" ಎಂದು ಜನ ಗಜಬಜಿಸಿತು. ಮಕ್ಕಳನ್ನು ಕುಕುಳಲ್ಲಿ ಎತ್ತಿಕೊಂಡು ಹೆಂಗಸರು ರಸ್ತೆಗೆ ಧಾವಿಸಿದರು. ಜನರು

ತಮ್ಮ ಮುಂಡಾಸು, ಟೊಪ್ಪಿಗೆಗಳನ್ನು ಸರಿಪಡಿಸಿಕೊಂಡರು. ಅಧಿಕಾರಿಗಳು ಸೆಟೆದುನಿಂತರು. ಸಂಸ್ಥಾನೀ ಪೋಲೀಸರು ಅಲ್ಲಿ ಇಲ್ಲಿ ಓಡಾಡಿದರು.

ಮಹಾರಾಜರ ಹೊಚ್ಚ ಹೊಸ ಕಾರು ಊರ ಅಗಸೆಗೆ ಬಂದೇಬಿಟ್ಟಿತು. ತಹಸೀಲದಾರರು ಬಗ್ಗಿ, ಮಹಾರಾಜರಿಗೆ ಹೇಳಿದರು– "ಖಾವಂದರವರು ಎತ್ತಿನ ಮೆರವಣಿಗೆಯ ಗಾಡಿಯಲ್ಲಿ ಊರೊಳಗೆ ಬರಬೇಕೆಂದು ಜನರ ಅಪೇಕ್ಷೆಯಾಗಿದೆ, ಕೃಪೆ ಮಾಡಬೇಕು."

'ಓಹೊ ! ಆಗಲಿ' ಎನ್ನುತ್ತ ಮಹಾರಾಜರು ಕಾರಿನಿಂದ ಹೊರಗೆ ಬಂದರು. ಕುರುಬರೆಲ್ಲ ತಮ್ಮ ರಾಜನನ್ನು ಕಣ್ತುಂಬ ನೋಡಿದರು. ಅವರ ಹೊಳೆಯುವ ಪೇಟಾ, ಉದ್ದನೆಯ ಶೇರವಾನಿ ಕೋಟು, ಅವರ ಹೊಳೆಯುವ ಕಣ್ಣುಗಳು, ನಿಡು ಮೂಗು, ದಪ್ಪ ಮೀಸೆ ಎದ್ದುಕಾಣು ವಂತಿದ್ದವು.

ನಾನು ನಮ್ಮ ಕಾರಭಾರಿಯನ್ನು ಸನ್ನೆ ಮಾಡಿ ಕರೆಯುತ್ತಲೂ ಅವನು ಅವರ ಮುಂದೆ ನಿಂತು ಮುಜುರೆ ಮಾಡಿ, ರೂಪಾಯಿ ಮತ್ತು ತೆಂಗಿನಕಾಯಿ ಯಿರುವ ತಾಟನ್ನು ಮುಂಚಾಚಿದನು.

"ಈ ಊರಿನ ಕಾರಭಾರಿಯೇನು ? ಹೇಗಿದ್ದೀ ?" ಎಂದು ಮಹಾರಾಜರು ಅವನ ಕುಶಲವನ್ನು ಕೇಳುತ್ತಲೂ ಕಾರಭಾರಿಯು ಧನ್ಯನಾಗಿ ಹೋದನು. ಮಹಾರಾಜರು ಮುಂದೆ ಸಾಗಿ, ಎತ್ತಿನ ಗಾಡಿಯನ್ನೇರಿ ಕುಳಿತರು. ಜನರೆಲ್ಲ ಬಗ್ಗಿ ಬಗ್ಗಿ ಮುಜುರೆ ಮಾಡುತ್ತಿದ್ದಂತೆಯೇ ಗಾಡಿಯು ಕೊಂಬು ಕಹಳೆ, ತಮಟೆಯವರ ಗದ್ದಲದಲ್ಲಿ ವ್ಯಾಯಾಮಶಾಲೆಯ ಕಟ್ಟಡ ವನ್ನು ತಲುಪಿತು. ರಾಜರು ಅದರಲ್ಲಿಂದ ಕೆಳಗಿಳಿದವರೇ 'ಎಲ್ಲಿದ್ದಾನೆ ಆ ಶಾಲಾಮಾಸ್ತರಾ ?' ಎಂದು ಕೇಳಿದರು. ನಾನು ಅವರ ಮುಂದೆ ನಿಂತೆ.

"ಶಾಭಾಸ್ ! ಬಹಾದ್ದೂರ ಕೆಲಸ ಮಾಡೀದಿ. ಏನು ನಿನ್ನ ಹೆಸರು ?" ಎಂದರು. "ರಾಜಾರಾಮ ವಿಠ್ಠಲ ಸೌಂದಣಿಕರ" ಎಂಬುದಾಗಿ ನಾನು ನನ್ನ ಹೆಸರನ್ನು ಹೇಳಿದೆ. ತಹಸೀಲದಾರರು ನನ್ನ ತಂದೆ ಸಂಸ್ಥಾನದ ಕಚೇರಿಯಲ್ಲಿ ಕಾರಕೂನನಿದ್ದ ವಿಷಯ ಹೇಳಿದಾಗ ಮಹಾರಾಜರು "ಹೀಗೇನು ? ಬಹಳ ಸಂತೋಷ" ಎಂದು ನುಡಿದರು. ನನ್ನ ಹೃದಯದಲ್ಲಿ ಸಂತೋಷಭಾವನೆ

ಹಿಡಿಸಲಾರದೇ ಹೋಯಿತು. ವ್ಯಾಯಾಮ ಶಾಲೆಯ ಬಾಗಿಲನ್ನು ತೆರೆದು, ಅಲ್ಲಿಯ ಮಾರುತಿಗೆ ಕಾಯಿ ನೈವೇದ್ಯ ಮಾಡಿ, ಮಹಾರಾಜರು ಅದರ ಉದ್ಘಾಟನೆ ನೆರವೇರಿಸಿದರು. ಹೊರಗೆ ಬಂದು ಸಭಾಸನದ ಮೇಲೆ ಕುಳಿತರು.

ನಾನು ಆರಂಭದ ಭಾಷಣ ಮಾಡಲೆಂದು ಎದ್ದುನಿಂತೆ. ಅದನ್ನು ಮೊದಲೇ ಬರೆದುಕೊಂಡಿದ್ದೆ. ಅದರಲ್ಲಿ ಊರವರೆಲ್ಲ ಅತ್ಯಂತ ಒಕ್ಕಟ್ಟಿನಿಂದ, ನಿಷ್ಠೆಯಿಂದ ಕೆಲಸ ಮಾಡಿದ್ದನ್ನು ಉಲ್ಲೇಖಿಸಿ ಮಹಾರಾಜರ ಕೃಪಾಪೂರ್ಣ ಆಶೀರ್ವಾದವಿರಲೆಂದು ಕೇಳಿಕೊಂಡೆನು.

ಮಹಾರಾಜರು ತಮ್ಮ ಭಾಷಣದಲ್ಲಿ ವಿದ್ಯೆ ಮತ್ತು ವ್ಯಾಯಾಮ ಒಟ್ಟಿಗೇ ಸಾಗಬೇಕು. ಚಿಕ್ಕ ಹಳ್ಳಿಯಲ್ಲಿದ್ದುಕೊಂಡು ನಮ್ಮ 'ಮಕ್ಕಳು' ಇಂಥ ದೊಡ್ಡ ಕಾರ್ಯವನ್ನು ಕೈಕೊಂಡದ್ದನ್ನು ನೋಡಿ, ತಮ್ಮ ಎದೆ ಎರಡು ಇಂಚು ಉಬ್ಬಿತೆಂದು ಹೇಳಿದರು. ಅಂಬಾ ಮಾತೆಯು ನಿಮ್ಮನ್ನು ಕರುಣಿಸಲಿ ಎಂದು ಹರಸಿದರು.

ಅಂತೂ ಕೈಗೊಂಡ ಕಾರ್ಯ ಒಮ್ಮೆ ಮುಗಿದಿತ್ತು! ಮಹಾರಾಜರ ಕಾರು ಧೂಳೆಬ್ಬಿಸುತ್ತ ಭುರ್ರೆಂದು ಹೋಗುತ್ತಲೂ ಇತರ ಅಧಿಕಾರಿಗಳು, ಒಬ್ಬೊಬ್ಬರಾಗಿ ಹೊರಟುಹೋದರು. ತಮ್ಮ ಜೀವಮಾನದಲ್ಲೇ ಇಂಥ ಉತ್ಸವವನ್ನು ಕಂಡಿರದ ಕುರುಬರು, ಅವರ ಹೆಂಡಂದಿರು, ಹುಡುಗರು ಮುಂದಿನ ಹಲವು ವಾರಗಳ ವರೆಗೆ, ಮಹಾರಾಜರನ್ನೂ ಆ ಪ್ರಸಂಗವನ್ನೂ ವರ್ಣಿಸುವವರೇ ಆದರು.

ಇಬ್ಬರಿಗೆ ಮಾತ್ರ ಮಹಾರಾಜನ ದರ್ಶನಭಾಗ್ಯ ದೊರೆಯಲಿಲ್ಲ. ಒಬ್ಬ ದಾದೂ, ಇನ್ನೊಬ್ಬ ಆಯಬೂ. ನಡೆಯಲಾರದ ಸ್ಥಿತಿಯಲ್ಲಿದ್ದ ದಾದೂ, ತನ್ನನ್ನು ಯಾರಾದರೂ ಎತ್ತಿಕೊಂಡು ಒಯ್ಯಬೇಕೆಂದು ಅಂಗಲಾಚಿದನು. ಆದರೆ ಅವನೇನಾದರೂ ಮಂಗನ ಹಾಗೆ ಮಾತನಾಡಿಯಾನು ಎಂದು ಹೆದರಿ, ಕಾರಭಾರಿಯೇ ಬೇಡವೆಂದುಬಿಟ್ಟ. ಆಯಬೂ ಬಿದ್ದು, ಎಚ್ಚರ ತಪ್ಪಿದ ವಿಷಯವನ್ನು ನನಗೆ ಬೇಕೆಂದೇ ಹೇಳಿರಲಿಲ್ಲ. ಮಹಾರಾಜರು ಹೋದನಂತರವೇ ಅದು ನನಗೆ ತಿಳಿದದ್ದು. ನನ್ನ ಸಂಭ್ರಮ ಅರ್ಧಕ್ಕರ್ಧ ಇಳಿದುಹೋಯಿತು. ಕೂಡಲೇ ಅವನಿದ್ದಲ್ಲಿಗೆ ಓಡಿದೆ.

[೯]

ವ್ಯಾಯಾಮ ಶಾಲೆಯು ಆರಂಭವಾಯಿತು. ವ್ಯಾಯಾಮಕ್ಕಾಗಿ ಹುಡುಗರು ಸದಾ ಬರುತ್ತಿದ್ದರು. ಕುಸ್ತಿಯ ಅಖಾಡದ ಕೆಂಪು ಮಣ್ಣಿನಲ್ಲಿ ದೊಡ್ಡವರು ಕೂಡಾ ಮೋಜಿಗಾಗಿ ಹೊರಳಾಡುತ್ತಿದ್ದುದುಂಟು.

ಬೇಸಗೆ ಮುಗಿದು ಮಳೆಗಾಲ ಸಮೀಪಿಸುತ್ತಿದ್ದ ಒಂದು ದಿನ ನಾನಿನ್ನೂ ಹಾಸಿಗೆ ಬಿಟ್ಟು ಎದ್ದಿರಲಿಲ್ಲ. ಅಷ್ಟರಲ್ಲಿ ಕಾರಭಾರಿಯು ಬಂದು ನನ್ನ ಹಾಸಿಗೆಯ ಮೇಲೆ ಕುಳಿತು ನನ್ನ ಕಾಲನ್ನು ಮುಟ್ಟಿ ಹೇಳಿದನು–

"ಮಾಸ್ತರಾ, ನಾ ಇನ್ನ ಹೊಂಟೆ. ಕಡೀ ನಮಸ್ಕಾರ ಇದು."

"ಎಲ್ಲಿಗೆ ? ಬರೂದು ಯಾವಾಗ ?

"ನಾಳೆ ಬೆಳಿಗ್ಗೆ. ನಾ ಇನ್ನ ಸಾಯಾಂವ ಇದ್ದೇನಿ." ಮುದುಕನ ಈ ಮಾತಿಗೆ ನನಗೆ ಹುಚ್ಚು ನಗೆ ಬಂತು. ಆದರೆ ಮುದುಕನ ಮುಖ ಗಂಭೀರವಾಗಿತ್ತು. ಆ ದಿನ ನಸುಕಿನಲ್ಲಿ ತನಗೆ ಬಿದ್ದ ಕನಸೊಂದನ್ನು ಹೇಳಿದನು. ಯಾರೊ ಒಬ್ಬ ದೇವತೆಯಂತೆ ಕಾಣುವವಳು ಅವನಲ್ಲಿಗೆ ಬಂದು "ನಾ ನಿನ್ನ ಕರಕೊಂಡು ಹೋಗಲಿಕ್ಕೆ ಬಂದೇನಿ. ನಾಳೆ ಹೋಗೋಣ ತಯಾರಾಗು" ಎಂದು ಹೇಳಿ ಕಣ್ಮರೆಯಾದಳಂತೆ !

"ಕನಸು ಎಂದರೆ ಖರೇ ಆಗತಾವೇನು ಧಣೀ ? ನಿನ್ನಂಥಾ ಜಾಣರೂ ಮಕ್ಕಳ ಹಾಂಗ ಹುಚ್ಚುಚ್ಚ ಮಾತಾಡ್ತಾರ ಅಂದ್ರ ಆಶ್ಚರ್ಯ ಆಗತದ."

ಮುದುಕನು ಕೇಳಲಿಲ್ಲ. ಮುಂದುವರಿದು ತನ್ನ ಆಸ್ತಿ–ಪಾಸ್ತಿಯ ಬಗ್ಗೆ ಮಾತನಾಡಿದ. ಅವನಿಗೆ ಇರುವವಳೆಂದರೆ ಅಂಜಾ ಮಾತ್ರ. ಅವಳ ಯೋಗಕ್ಷೇಮವನ್ನು ಶೆಕೂಬಾನಿಗೆ ಒಪ್ಪಿಸಿ ಅವಳ ಮದುವೆಯ ವ್ಯವಸ್ಥೆ ಮಾಡಲು ಅವನಿಗೆ ಹೇಳುತ್ತೇನೆ ಎಂದ. "ನೀನೂ ಅಟು ನಿಗಾ ಇಡು" ಎಂದು ನನಗೆ ವಿನಂತಿಸಿದ.

ಮುಂದೆ ಊರೊಳಗೆ ಅನೇಕರ ಮನೆಗಳಿಗೆ ಹೋಗಿ, ತನ್ನ ಕನಸಿನ ವಿಚಾರ ಹೇಳಿ, ಎಲ್ಲರನ್ನೂ ಬೀಳ್ಕೊಡುವ ಮಾತುಗಳನ್ನಾಡತೊಡಗಿದನು. ಶೆಕೂಬಾನಂಥ ಭೋಳೇ ಸ್ವಭಾವದವನೂ ಕೂಡಾ "ನಿನ್ನ ಕನಸಿಗೆ ಕಲ್ಲು ಹಾಕ. ಇನ್ನೂ ಐದ ವರಸ ಬದುಕತೀ ಹೋಗು !" ಎಂದು ಹೇಳಿದನು.

ಆದರೆ ಕತ್ತಲೆಯಾಗುವಷ್ಟರಲ್ಲಿ, ನನಗೆ ಮುದುಕನ ಮನೆಯಿಂದ ಕರೆಬಂದಿತು. ಪ್ರತಿಯೊಂದು ಮನೆಯವರೂ ಅಲ್ಲಿ ಸೇರಿದ್ದರು. ಮುದುಕನ ಮುಖ ಬಿಳಿಚಿಕೊಂಡಿತ್ತು. ನಿರ್ವಿಣ್ಣನಾಗಿದ್ದ. ನನ್ನನ್ನು ನೋಡಿ "ನಾ ಹೇಳಿದ್ದು ಸುಳ್ಳಲ್ಲ. ಕರೇನ ಹೋಟೇನಿ" ಎಂದ.

"ಏನಿಲ್ಲ, ನಾಳೆ ಬೆಳಗಾಗೋದರಲ್ಲಿ ಗುಣಾ ಆಗ್ತ್ವದ' ಎಂದೆ ನಾನು. ಔಷಧಿ ಉಪಚಾರವನ್ನೇನೊ ಮಾಡಿದೆವು. ಆದರೆ ಪ್ರಯೋಜನವಾಗಲಿಲ್ಲ. ಅವನ ಉಸಿರು ಕ್ಷೀಣವಾಗುತ್ತ ನಡೆದು, ಬೆಳಗನ್ನು ಕಾಣುವ ಮುಂಚೆಯೇ ಮುದುಕನು ಬನಗರವಾಡಿಯನ್ನು ಬಿಟ್ಟು ದೂರ, ಬಹು ದೂರ ಹೋಗಿ ಬಿಟ್ಟಿದ್ದ. ಊರಿಗೆ ಊರೇ ಬರಿದಾಗಿ ಕಂಡಿತು—ನನಗೆ ! ನನ್ನವರೆನ್ನುವವರು ಅಲ್ಲಿ ಯಾರೂ ಇಲ್ಲ, ಎಂದು ಮನಸ್ಸು ತೊಳಲಿತು. ಆ ಶಾಲೆ, ಆ ಕಟ್ಟಡ, ನನ್ನ ಕೋಣೆ ಎಲ್ಲವನ್ನೂ ಬಿಟ್ಟು ಹೋಗಿಬಿಡಬೇಕೆನಿಸಿತು.

## [೧೧]

ಊಟ ಮಾಡಿ ನನ್ನ ಕೋಣೆಯಲ್ಲಿ ಓದುತ್ತ ಕುಳಿತಿದ್ದೆ. ಶೆಕೂಬಾನ ಮಾರುದ್ದದ ಹೆಂಡತಿ ಬಂದಳು. ಬಾಗಿಲಲ್ಲಿ ನಿಂತು "ಏನು ನಡದೇತಿ ಮಾಸ್ತರ" ಎಂದು ಕೇಳಿದಳು.

"ಏನಿಲ್ಲ, ಬಾ" ಎಂದು ಕರೆದೆ. ಆಕೆ ನನ್ನ ಮುಂದೆ ಒಂದು ಸೇರಿನಷ್ಟು ಸೇಂಗಾ ಸುರಿದು, "ನಮ್ಮ ಹೊಲದ್ದು, ನಿಮಗಂತ ತಂದೇನಿ" ಎಂದಳು. ಮುಂದೆ ಮಾತಿಲ್ಲ. ಆಕೆಗೆ ಏನೊ ಹೇಳುವದಿತ್ತು ಎಂಬುದು ಸ್ಪಷ್ಟವಾಗಿದ್ದಿತು. ಆದರೆ ಬಾಯಿ ಬಿಡಲೊಲ್ಲಳು. ವಿಷಯವನ್ನೇನೊ ಊಹಿಸಿದೆ. ಅದೇ ಶೆಕೂ—ಅಂಜಾ ಇವರ ಸಂಬಂಧ. ಅದು ಊರೊಳಗೂ ಹಬ್ಬಿದ್ದಿತು. ಕೊನೆಗೊಮ್ಮೆ "ನನ್ನ ಗಂಡನ ಏನ ಮಾಡಬೇಕು, ಮಾಸ್ತರ? ಆ ಅಂಜೀ ಬೆನ್ನುಹತ್ತಿ ತಿರಗತಾನ'

"ಹೀಂಗೇನು ?" ಅವರ ಸಂಬಂಧದ ಸುದ್ದಿ, ಊರಲ್ಲಿ ಹಬ್ಬಿಲ್ಲ, ನನಗೂ ಗೊತ್ತಿಲ್ಲ ಎಂಬ ಭಾವನೆ ಅವಳಲ್ಲಿ ಬರಲಿ ಎಂಬುದಾಗಿ ಹಾಗೆ ಕೇಳಿದೆ.

"ನಮಗ ಮಕ್ಕಳಿಲ್ಲಾಂತ, ಅಂಜೀನ್ನ ಮದುವಿ ಆಗ್ತಾನಂತ. ಅಂಥಾದೇನು ಆಸ್ತಿ ಅಳತೈತಿ ನಮ್ಮದು ಮಕ್ಕಳಿಲ್ಲದ ? ಊರಾನ್ನ ಜನಾ ಎಲ್ಲಾ

ಇದನ್ನs ಆಡಿಕೋತಾರು. ಹೆಂಗ ಅವನ್ನ ಹಾದಿಗೆ ತರಬೇಕು, ತಿಳೀವಲ್ಲದು. ಖುದ್ ಮಹಾರಾಜರ ತನಾನೂ ನಿಮ್ಮ ವಜನ ಐತಿ. ನಮ್ಮ ಗಂಡಗ ಬುದ್ಧೀ ಹೇಳರಿ. ಅಸ್ಟು ಜೋರು ಮಾಡಿರಿ" ಎಂದು ಅಳು ದನಿಯಲ್ಲಿ ಹೇಳಿದಳು. ಹೊಲಗೆಲಸದಂಥ ಕಷ್ಟದ ಕೆಲಸವೂ ಹೆಂಗುಸಾದ ಅವಳ ಮೇಲೆ ಯಾವ ಪರಿಣಾಮವನ್ನೂ ಮಾಡಿರಲಿಲ್ಲ. ಸ್ವತಃ ನೇಗಿಲಿಗೆ ತನ್ನ ಹೆಗಲನ್ನು ಕೊಟ್ಟವಳು ಆಕೆ. ಈಗ ತನ್ನ ಗಂಡನು ಈ ರೀತಿಯಾಗಿ ಬೇರೊಂದು ಹೆಣ್ಣಿನ ಹಿಂದೆ ಹರಿದಾಡುವುದು ಅವಳನ್ನು ಬಹಳಷ್ಟು ಗಾಸಿಗೊಳಿಸಿದ್ದಿತು. ಇತ್ತ ಅಂಜಾಳ ಮದುವೆಯನ್ನು ಮಾಡದಿದ್ದುದರಿಂದ ಆ ವಯಸ್ಸಿಗೆ ಅವಳು ಶೆಕೂಬಾನನ್ನು ಕಣಿಸುವುದು ಸಹಜವೇ ಆಗಿದ್ದಿತು. ಒಂದಿಷ್ಟು ಬಹಿರಂಗವಾಗಿಯೇ ಇದು ನಡೆದಿದ್ದಿತು. ಇಬ್ಬರೂ ಕೂಡಿಯೆ ಕುರಿ ಮೇಯಿಸಹೋಗುತ್ತಿದ್ದರಂತೆ. ಒಮ್ಮೆಯಂತೂ ಕೆಲವು ಕುರಿಗಳನ್ನು ಮಾರಿ ಶೆಕೂಬಾ ಅಂಜಾನಿಗೆ ಬೆಳ್ಳಿಯ ತೋಡೆ ಮಾಡಿಸಿಕೊಟ್ಟನಂತೆ.

ಮುಂದೊಂದು ದಿನ ಶೆಕೂಬಾ ಮತ್ತು ಅವನ ಹೆಂಡತಿಯ ನಡುವೆ ಭಾರೀ ಜಗಳವಾಯಿತು. ಮಧ್ಯರಾತ್ರಿಯಲ್ಲಿ ನಡೆದ ಆ ಜಗಳದ ಕಾರಣ, ವಿವರಗಳು ತಿಳಿದುಬರಲಿಲ್ಲ. ಶೆಕೂನ ಹೆಂಡತಿ ಮನೆಬಿಟ್ಟು ಹೊರಟಾಗಲೇ ಅದು ಗಂಭೀರ ಸ್ವರೂಪದ್ದು ಎಂಬುದು ನಮಗೆ ತಿಳಿಯಿತು. ಆಕೆ ದಿನಗೂಲಿ ಮಾಡುತ್ತ ಹಾಳು ಬಿದ್ದ ಒಂದು ತಗಡಿನ ಮನೆಯಲ್ಲಿ ವಾಸ ಮಾಡತೊಡಗಿದಳು. ಆಗಂತೂ ಅಂಜಾ ಶೆಕೂಬಾನ ಮನೆಯಲ್ಲಿಯೆ ಬಂದು ನಿಂತಳು. ಇತ್ತ ಶೆಕೂಬಾ ಎರಡನೆಯ-ಫಲ ಮದುವೆಯ ತಯಾರಿಯಲ್ಲಿ ತೊಡಗಿದನು.

ಶೆಕೂನ ಹೊಲದ ಮಗ್ಗುಲಿಗೆ, ಪರ ಊರಿನವನೊಬ್ಬನ ಹೊಲ ಇದ್ದಿತು. ಅದರಲ್ಲಿ ಒಂದು ವಾರದ ಮಟ್ಟಿಗೆ ಕುರಿ ಮೇಯಿಸುವುದಕ್ಕಾಗಿ, ಒಬ್ಬ ಕುರುಬರ ಯುವಕನು ಬರುತ್ತಿದ್ದನು. ಆತ ಬನಗರವಾಡಿಯವನಲ್ಲ. ಅಂಜಾನೂ ಶೆಕೂನ ಹೊಲದಲ್ಲಿಯೆ ಹೆಚ್ಚಾಗಿ ಇರುತ್ತಿದ್ದಳು. ಆ ಒಂದು ವಾರದ ಅವಧಿಯಲ್ಲಿ, ಬೆಳೆದ ಅವರಿಬ್ಬರಲ್ಲಿಯ ನಂಟುತನ ನಮಗೆ ತಿಳಿದು ಬರುವಷ್ಟರಲ್ಲಿ ಆ ಯುವಕನು ತನ್ನ ಊರಿಗೆ ಮರಳುವಾಗ, ಸಂಗಡ ಅಂಜಾನನ್ನು ಕರೆದುಕೊಂಡು ಹೋಗಿಬಿಟ್ಟನು ! ಶೆಕೂಬಾನಿಗೆ ಆಕೆಯು ಕೊಟ್ಟಿದ್ದ ಮದುವೆಯ ವಚನ ಅಲ್ಲೇ ಉಳಿಯಿತು.

ಆದಾಗಿ ಕೆಲವೇ ದಿನಗಳ ನಂತರ, ಶೆಕೂಬಾನ ಹೆಂಡತಿ ನಗುಮುಖ ದಿಂದ ನನ್ನ ಕೋಣೆಯಲ್ಲಿ ಕಾಲಿರಿಸುತ್ತ ಹೇಳಿದಳು: "ನಮ್ಮ ಹುಚ್ಚ ತಿರುಗಿ ಬಂದೇತ್ರಿ, ಮಾಸ್ತರ !"

[೧೧]

ಪ್ರತಿ ವರುಷದಂತೆ ಊರಮ್ಮನ ಜಾತ್ರೆ ಬಂದಿತು. ಅವಳ ಗುಡಿಯು ಊರಹೊರಗೆ ಒಂದು ಮೈಲು ದೂರದಲ್ಲಿ ಇದೆ. 'ಗುಡಿಯೆಂಥದು... ಅದೊಂದು ಕಲ್ಲಿನ ಗೂಡು. ಅವಳ ಗುಡಿಯನ್ನು ಕಟ್ಟಬೇಕೆಂದು ಕುರುಬ ರೇನೊ ಗೊತ್ತು ಮಾಡಿಕೊಂಡರು. ಆದರೆ ಆಕೆ ಪೂಜಾರಿಯ ಕನಸಿನಲ್ಲಿ ಬಂದು ಹೇಳಿದಳಂತೆ; "ನನಗೆ ಬೇಡ ಅದೆಲ್ಲ, ನಾನು ಹೀಗೇ ಆರಾಮವಾ ಗಿದ್ದೇನೆ!"

ಬನಗರವಾಡಿಯವರೂ ನೆರೆಯೂರಿನವರೂ ಸೇರಿ ೧೫೦ ಜನರಿರ ಬಹುದು. ಹೊಸ ಬಟ್ಟೆ ಹಾಕಿಕೊಂಡು ಆ ಗುಡಿಯ ಮುಂದೆ ನೆರೆದರು. ಪೂಜಾರಿಯು ದೇವಿಯ ಪೂಜೆ ಮಾಡಿದನು. ನೆರೆದವರೊಬ್ಬೊಬ್ಬರಿಗೇ ಕುಂಕುಮ ಹಚ್ಚಿದನು.

ಅಷ್ಟರಲ್ಲಿ ಬಾಳಾ ಬನಗರ ತನ್ನ ಹೆಂಡತಿ, ಮಕ್ಕಳನ್ನು ಕರೆದುಕೊಂಡು ಬಂದನು. ಯಾರೂ ಅವನನ್ನು ಮಾತಾಡಿಸಲಿಲ್ಲ. ಊರವರು ಅವನ ಮೇಲೆ ಹಾಕಿದ ಬಹಿಷ್ಕಾರ ಇನ್ನೂ ಇದ್ದಿತು. ಮಹಾರಾಜರು ಬಂದಾಗಲೂ ಅವನು ದೂರವೇ ಉಳಿದಿದ್ದನು. ಉಳಿದವರ ಬಿರುನೋಟವನ್ನು ಗಣಿಸದೇ ಬಂದು ದೇವಿಗೆ ತಲೆವಾಗಿ, ಹೂ ಏರಿಸಿದನು. ಅಲ್ಲಿಂದ ಪೂಜಾರಿಯ ಮುಂದೆ ಬಂದು ನಿಂತನು.

"ನಾ ನಿನಗೆ ಕುಂಕಮಾ ಹಚ್ಚೂದಿಲ್ಲ, ಊರವರ ವಿರುದ್ಧ ನಿಂತೀದಿ" ಎಂದು ಪೂಜಾರಿಯು ಹೇಳಿದನು.

ಬಾಳಾನ ಮುಖ ಪೆಚ್ಚಾಯಿತು. ಎಂತಹ ಕಷ್ಟಬಂದರೂ ಮನಸ್ಸು ಅದರಿಂದಾಗಿ ನಿರ್ವಿಣ್ಣವಾಗಿದ್ದರೂ ಇಷ್ಟು ದಿನ ಹೇಗೋ ಊರಜನರ ವೈರ ಕಟ್ಟಿಕೊಂಡು ಬಾಳಿದ್ದನು. ಈಗ ದೇವಿಯ ಅವಕೃಪೆಗೂ ಪಾತ್ರವಾಗುವು ದೆಂದರೆ ! ಕೂಡಲೇ ಅವನು ತನ್ನ ಧೋತರದ ಉಡಿ ಒಡ್ಡಿ—

"ನಂದು ತಪ್ಪಾಗೇತಿ. ನನ್ನ ನಿಮ್ಮೊಳಗ ಕರಕೊಳ್ರಿ. ನನ್ನ ಬೇವಿನ ಮರಾ, ಹೊಲಾ, ಕುರಿ ಏನು ಬೇಕಾದರೂ ತಗೊಳ್ರಿ. ನನ್ನ ಜೀವಾಸೈತ ಕೊಡತೇನಿ. ನನ್ನ ನಿಮ್ಮೊಳಗ ಕರಕೊಳ್ರಿ" ಎಂದು ಅಂಗಲಾಚಿದನು.

ಎಲ್ಲರೂ ಸುಮ್ಮನಿದ್ದರು. ಆಗ, ಹಿರಿಯನಾದ ಕಾಕುಬಾ ಹೇಳಿದ. "ಕೂಸು ತೊಡೀಮ್ಯಾಗ ಹೊಲಸು ಮಾಡಿದರ, ಯಾರರೆ ತೊಡೀನೇ ಕತ್ತರಿಸಿ ಒಗೀತಾರೇನು? ಅವಗ ಕುಂಕಮಾ ಹಚ್ಚಿಸಿರಿ" ಎಂದನು. ಆಗ ಪೂಜಾರಿ ಅವನಿಗೆ ಕುಂಕಮ ಹಚ್ಚಿದನು.

ಎಲ್ಲರೂ "ಊರವ್ವ ನಿನ್ನಾಲಕುಧೊ" ಎಂದು ಕೂಗಿದರು. ಗಜ್ಜರಿ ಗೆಣಸುಗಳನ್ನು ದೇವಿಯ ಮುಂದೆ ನಿವಾಳಿಸಿ ಒಗೆದಾಗ ಅದನ್ನು ಆರಿಸಿ ಕೊಳ್ಳಲು ನೂಕು ನುಗ್ಗಲಾಯಿತು. ಜೋಗಪ್ಪ ಒಂದೇಸವನೆ ಡೊಳ್ಳು ಬಾರಿಸತೊಡಗಿದನು.

ತತ್‌ಕ್ಷಣ ಧೂಳಾ ಕುರುಬನು ತನ್ನ ಹೆಗಲಮೇಲಿನ ಕಂಬಳಿಯನ್ನು ಬಿಸಾಡಿ ಕುಣಿಯತೊಡಗಿದನು. ಅದರ ರಭಸಕ್ಕೆ ಅವನ ಹಣೆಯಮೇಲಿನ ಕುಂಕುಮವು ಬೆವರಿನಿಂದ ತೊಯ್ದು ರಕ್ತದಂತೆ ಹರಿಯಿತು. "ದೇವಿ ಬಂದಳು ! ನಮ್ಮವ್ವ ಬಂದಳು !" ಎಂದು ಕೂಗಿ ಜನರು ಅವನ ಸುತ್ತ ನೆರೆದರು.

ಶೆಕೂಬಾ ಕೇಳಿದ "ಈ ವರುಷ ಮಳೆ ಆಗಿಲ್ಲ. ಮಿರುಗ [ಮೃಗ ನಕ್ಷತ್ರ] ಹೋತು. ಇನ್ನಾ ಬಿತಿಗಿಯಾಗಿಲ್ಲಾ. ಹಿಂಗ್ಯಾಕ ಆತು ?"

ಧೂಳಾನ ಮೈಯಲ್ಲಿ ಬಂದಿದ್ದ ದೇವಿ "ಪಾಪ ಬಾಳಾತು. ಅದಕ ಮಳಿ ಹೋತು, ನನ್ನ ಪೂಜಿ ಚಲೋತ್ನ್ಯಾಗ ಮಾಡ್ರಿ" ಎಂದು ಮುಂತಾಗಿ ಹೇಳಿದಳು.

ಶೆಕೂಬಾ ಜೋರಾಗಿ ತನ್ನ ಕಪಾಳಕ್ಕೆ ಬಡಿದುಕೊಳ್ಳುತ್ತ "ಕ್ಷಮಾ ಮಾಡು ತಾಯೀ. ನಿನ್ನ ಜಾತ್ರಿ ಚಲೋಮಾಡ್ತೇವು" ಎಂದು ಅಡ್ಡಬಿದ್ದನು. ಧೂಳಾ ಕುಣಿಯುತ್ತಲೇ ಇದ್ದವನು, ದೇವಿಯು 'ಹೊರಟುಹೋದ' ಮೇಲೆ ನೆಲಕ್ಕೆ ಬಿದ್ದ.

ಇತ್ತ ಕುರಿಗಳನ್ನು ಕಡಿದು, ದೇವಿಗೆ ಎಡೆಯಿಡಲಾಯಿತು. ಕಡಿಯು ವಾಗ ಚಿಮ್ಮಿದ ರಕ್ತದ ಹನಿಗಳನ್ನು ದೇವಿಗೆ ಸಿಂಪಡಿಸಿದರು.

ಪ್ರತಿ ವರುಷ ಎಲ್ಲರೂ ಅಲ್ಲಿಯೇ ಊಟ ಮಾಡಿಕೊಂಡು ಹೋಗುವ ಕ್ರಮವಿದ್ದಿತು. ಈ ಸಲ, ಊರೊಳಗೆ ಹೋಗಿ ರೊಟ್ಟಿ ಮಾಡಿಕೊಂಡು ಬಂದರು. ಅಲ್ಲಿಯೇ ಬೇಯಿಸಿದ್ದ ಕುರಿ ಮಾಂಸದ ಪಲ್ಲೆಯನ್ನು ಹಾಕಿಸಿ ಕೊಂಡರು, ತಿಂದರು.

ದೇವಿಯ ಜಾತ್ರೆಯು ಹೀಗೆ ಕ್ರಮಪ್ರಕಾರವಾಗಿ ನಡೆದರೂ ಮಳೆ ಮಾತ್ರ ಆಗಲೇ ಇಲ್ಲ. ಕಾಯ್ದ ನೆಲ ಆರಲಿಲ್ಲ. ಗಿಡ-ಗಂಟೆಗಳು ಒಣಗಿ ಬರಲಾದುವು. ಊರಿನ ದೊಡ್ಡ ಕಪ್ಪಲಿ ಬಾವಿಯ ನೀರು ತಳಕಂಡು ಅಲ್ಲಿ ರಾಡಿ ನೀರು ಮಾತ್ರ ಉಳಿದಿದ್ದಿತು. ಅದನ್ನು ಸಹ ಹೆಂಗಸರು ತಾಸುಗಟ್ಟಲೆ ಕೆರೆದು ತುಂಬಿ ಒಯ್ಯುತ್ತಿದ್ದರು. ಸಂಜೆಯನ್ನುವಷ್ಟರಲ್ಲಿ ಗುಬ್ಬಿ ಕುಡಿಯು ಲೆಂದರೂ ಒಂದು ಕಾಳು ನೀರು ಉಳಿಯುತ್ತಿರಲಿಲ್ಲ. ರಾತ್ರಿಯ ಕಾಲದಲ್ಲಿ ಸೆಲೆಯಿಂದ ಒಂದಷ್ಟು ನೀರು ಒಸರುತ್ತಿತ್ತು. ಅದನ್ನು ಒಯ್ಯಲೆಂದು ಕತ್ತಲಿರು ವಾಗಲೇ ಕುರುಬ ಹೆಂಗಸರು ಧಾವಿಸಿ ಬರುತ್ತಿದ್ದರು. ಜಗಳಾಡುತ್ತಿದ್ದರು.

ಇತ್ತ ಊರಿನ ದನಗಳ ಎಲಬುಗಳು ಕಾಣಿಸಿಕೊಂಡವು. ನೀರಿಗಾಗಿ ಕುರಿಗಳನ್ನು ಬಹುದೂರ ಒಯ್ಯಬೇಕಾಗುತ್ತಿತ್ತು. ಹಸಿವಿನಿಂದ ಕಂಗಾಲಾದ ಅಡವಿಯ ಇಲಿಗಳು ಊರೊಳಗೆ ಬಂದು, ಆಹಾರವನ್ನು ಹುಡುಕುವಾಗ ಬುಟ್ಟಿಗಳನ್ನು ತೂತು ಮಾಡಿದವು, ಕಂಬಳಿಗಳನ್ನು ಕಡಿದವು.

ಜನರ ಮುಖದಲ್ಲಿ ಹಸಿವೆಯ ಕಳೆ ಎದ್ದುತೋರಿತು. ಇದ್ದಬಿದ್ದ ಸಂಗ್ರಹ ತೀರಿ ಹೋಯಿತು. ರಾಮೋಶಿಯವರಂಥ ದಿನಗೂಲಿಯವರ ಗೋಳಂತೂ ಹೇಳತೀರದು. ಶಾಲೆ, ಗರಡೀ ಮನೆಗಳಿಗೆ ಯಾರೂ ಬಾರ ದಾದರು.

ಬನಗರವಾಡಿಯನ್ನು ಬಿಟ್ಟು ಜನ ಒಬ್ಬೊಬ್ಬರೇ ಗಂಟೆ ಕಟ್ಟಿಕೊಂಡು ಹೊರಡಲನುವಾದರು. ಇಡೀ ಜಿಲ್ಲೆಗೇ ಬರಗಾಲ ಬಂದಿದ್ದಿತು.

ಇದು ಸಾಲದೆಂಬಂತೆ ಮೊದಲೇ ಉಪವಾಸದಿಂದ ಬಳಲುತ್ತಿದ್ದ ಕುರಿ ಗಳಿಗೆ 'ಸಂಗ್ರಹಿಣೀ' ರೋಗ ಬಂದಿತು. ಕುರಿಗಳು ಪಟಪಟನೇ ಸಾಯ

ತೊಡಗಿದವು. ನೂರಿನ್ನೂರು ಕುರಿಗಳನ್ನು ವೈಭವದಿಂದ ಸಾಕಿದ್ದ ಬೀರಾ-ಸತಾನ ಕುರಿಗಳೆಲ್ಲವನ್ನೂ ಒಂದೇ ವಾರದಲ್ಲಿ ಆ ರೋಗವು ಬಲಿತೆಗೆದು ಕೊಂಡಿತು.

ಶೆಕೂಬಾ ತನ್ನ ಒಂಟಿ ಎತ್ತನ್ನು ಹೊಡಿಕೊಂಡು ಸಾಗಿದ್ದಾಗ ಅವನನ್ನು ಕೇಳಿದೆ.

"ಎಲ್ಲಿಗೋ" ?

"ಇದನ್ನು ಪೇಟೆಗೆ ಹೊಡೆದುಕೊಂಡು ಹೊರಟಿದ್ದೇನೆ. ಎಲ್ಲಿಯಾದರೂ ಹೊಟ್ಟೆತುಂಬ ತಿನ್ನಲಿ"

ಪೇಟೆಯಲ್ಲಿ ಅದನ್ನು ಕೊಳ್ಳಲು ಯಾವ ರೈತನೂ ಮುಂದೆ ಬರಲಿಲ್ಲ. ಒಬ್ಬ ಕಟುಗರವನು ೭ ರೂ. ಗೆ ಕೇಳಿದ. ಚೂರಿ ಹಾಕಿ ಸಾಯುವುದಾದರೆ ನನ್ನ ಮನೆಯ ಮುಂದೆಯೇ ಸಾಯಲಿ ಎಂದು ಮರಳಿ ತೆಗೆದುಕೊಂಡು ಬಂದನು.

ಆನಂದಾ ರಾಮೋಶಿ ಗುಳೆಕಟ್ಟಿಕೊಂಡು ಹೊರಟಿದ್ದಾಗ ಮುದ್ದಾಂ ನಾನಿರುವ ಕೋಣೆಯ ಬಳಿಗೆ ಬಂದು ಹೇಳಿದ "ಮಾಸ್ತರಾ, ಹೋಗಿ ಬರ ತೇನಿ. ಮುಂದಿನ ವರ್ಷ ಮಳಿ ಆದ್ರ, ಮತ್ತ ನಿಮ್ಮ ಭೆಟ್ಟಿ. ಇಕಾ, ಇನ್ನೊಂದು ಮಾತು. ಆ ದಾದೂನ್ನ ಮೈಹುಳೀ ಹೊಡದವ್ರು ಮತ್ಯಾರೂ ಅಲ್ಲಾ. ನಾನೂ, ಆಯುಬೂ. ನಿಮಗ ಬಾಳ ತರಾಸ ಕೊಡತಿದ್ದಾ ಅದಕ್ಕ."

ಜನ ಗುಳೆ ಹೊರಡುವಾಗ ಇಂಥದೇ ಸ್ಥಳ ಎಂದು ಗೊತ್ತುಪಡಿಸಿ ಕೊಂಡಿರಲಿಲ್ಲ. ಹಸಿವಿನ ಹಾಹಾಕಾರದಿಂದ ಊರು ಬಿಟ್ಟು ಹೋಗುವ ದೊಂದೇ ಅವರ ಮನಸಿನಲ್ಲಿತ್ತು.

ರಾಮಾ ಬನಗರನೂ ಹೊರಡುವ ಮುನ್ನ ಬಂದು, ನನ್ನನ್ನು ಅಪ್ಪಿ ಕೊಂಡನು. ಅವನ ತಂದೆ ಮಾತ್ರ ಊರ ಬಿಡಲು ಒಪ್ಪಿರಲಿಲ್ಲ. ಕುರಿಗಳಿ ಗಾಗಿ ನಿರ್ವಾಹವಿಲ್ಲದೆ ರಾಮಾ ಹೊರಟಿದ್ದನು. ತನ್ನ ತಂದೆಯ ಸಲುವಾಗಿ ತುಸು ಧಾನ್ಯವನ್ನೂ ಅವನ ಸೇವೆಗಾಗಿ ತನ್ನ ಹೆಂಡತಿಯನ್ನೂ ಹಿಂದೆ ಬಿಟ್ಟಿ ದ್ದನು. ಕುರಿಮಂದೆಯಿಲ್ಲದೆ ಅವನ ತಂದೆಗೆ ಹೇಗೊ ಹೇಗೊ ಆಯಿತು. "ಎರಡು ಕುರಿಗಳನ್ನಾದರೂ ಬಿಟ್ಟು ಹೋಗು. ನನ್ನ ಆಹಾರದಲ್ಲೇ

ಅವಕ್ಕೂ ತಿನಸತೇನಿ. ಅದು ತೀರಿತೆಂದ್ರ ಒಟ್ಟಿಗೇ ಕಣ್ಣ ಮುಚ್ಚತೀವಂತ" ಎಂದು ಎರಡನ್ನು ನಿಲ್ಲಿಸಿಕೊಂಡನು.

ದಾದೂ ಸಹಿತ ಹೊರಟು ನಿಂತನು. ಬಾಳಾ ಬನಗರ ಅವನನ್ನು ಹೊತ್ತುಕೊಂಡು ಒಯ್ಯುವುದಕ್ಕೆ ಒಪ್ಪಿಕೊಂಡಿದ್ದನು. ಸಾಲೆಯು ಹತ್ತಿರ ಬಂದಕೂಡಲೇ ದಾದೂ ಕೂಗಿದ : "ಮಾಸ್ತರಾ ನಾ ಹೊಂಟೆ. ಆದರ ತಿರುಗಿ ಬರತೇನಿ ! ಬಂದು, ನಿನಗ ಒಂದು ಕೈ ತೋರಸ್ದ ಬಿಡೂದುಲ್ಲ."

ಈಗ ಕಾಕೂಬಾ ಮತ್ತು ಅವನ ಸೊಸೆಯನ್ನು ಬಿಟ್ಟರೆ ಯಾರೂ ಉಳಿದಿರಲಿಲ್ಲ. ಊರೆಲ್ಲ ಬಿಕೋ ಎನ್ನುತ್ತಿತ್ತು. ಇಡೀ ದಿನ ನಾನು ಆಯುಬೂ ಇಬ್ಬರೇ. ಆಯುಬೂನೂ ಒಮ್ಮೊಮ್ಮೆ ಎಲ್ಲೊ ಹೋದವನು ಧೂಳಡರಿದ ಮತ್ತು ಸುಸ್ತಾದ ಕಾಲುಗಳನ್ನು ಎಳೆದುಕೊಂಡು ಸಂಜೆಗೇ ಹಿಂತಿರುಗುತ್ತಿದ್ದನು. "ಎಲ್ಲಿ ಹೋಗಿದ್ದೆ" ಎಂದರೆ "ಸುಮ್ಮನೆ ಕಾಲು ಸಡಿಲು ಮಾಡಿಕೊಳ್ಳಾಕ" ಎಂದು ಹೇಳುತ್ತಿದ್ದ. ನಾನು ಊರಿನಿಂದ ತರುತ್ತಿದ್ದ ತಂಗಳ ರೊಟ್ಟಿಯನ್ನು ತಿಂದರೆ, ಒಂದು ಚೂರು ತಿಂದ; ಇಲ್ಲವಾದರೆ ಇಲ್ಲ. ಆಗ್ರಹ ಮಾಡಿದರೆ ಮಾತಿಲ್ಲದೆ ಎದ್ದು ಹೋಗಿಬಿಡುವ.

ಹೀಗೆಯೇ ದಿನಗಳು ಉರುಳಿದವು. ಕೊನೆಗೊಮ್ಮೆ ಸರಕಾರದಿಂದ ಆರ್ಡರ್ ಬಂದಿತು. ಶಾಲೆಯನ್ನು ಮುಚ್ಚಿ ತಾಲೂಕಿನ ಪ್ರಾಥಮಿಕ ಶಾಲೆಗೆ ಹಾಜರಾಗಲು.

ಆಯುಬೂ ನನ್ನ ಸಾಮಾನುಗಳನ್ನು ಕಟ್ಟಿದ. "ನಿಮ್ಮನ್ಯಾಗ ಇದನ್ನ ಇಟ್ಟಕ್ಯಾಸ ಹೊಳ್ಳಿ ಬರತೇನಿ" ಅಂದ. ಆ ಮೇಲಿನ ಅವನ ಹೊಟ್ಟೆಯ ಚಿಂತೆ ನನ್ನಲ್ಲಿ ಸುಳಿಯಲಿಲ್ಲ. ಸಾಲೆ, ವ್ಯಾಯಾಮ ಶಾಲೆಗಳಿಗೆ ಬೀಗಹಾಕಿದೆ. ಕಾಕೂಬಾನ ನಿರೋಪ ತಗೊಂಡು ಹೊರಟೆ. ಆಯುಬೂ ಸಾಮಾನನ್ನು ಹೊತ್ತುಕೊಂಡು ಬರುತ್ತಲಿದ್ದ. ಸುತ್ತುಮುತ್ತು ಎಲ್ಲಿಯೂ ಒಂದು ದನ, ಕುರಿಯಾಗಲೀ, ಮನುಷ್ಯನಾಗಲೀ ಕಾಣಲಿಲ್ಲ. ಬರಿದಾಗಿದ್ದ ಬನಗರವಾಡಿಯನ್ನು ಹಿಂದೆಬಿಟ್ಟು ನಾನು ಮುಂದೆ ಸಾಗಿದೆ.

# ಪಥೇರ್ ಪಾಂಚಾಲಿ

ವಿಭೂತಿಭೂಷಣ ವಂದ್ಯೋಪಾಧ್ಯಾಯ ಅವರು ಬಂಗಾಲಿಯ ಪ್ರಖ್ಯಾತ ಕಾದಂಬರಿಕಾರರು. ಅವರ 'ಪಥೇರ್ ಪಾಂಚಾಲಿ' ಪ್ರಪಂಚದ ಶ್ರೇಷ್ಠ ಕಾದಂಬರಿಗಳಲ್ಲಿ ಒಂದು. ಭಾರತದ ಬಡತನದ ಜೀವಂತ ಚಿತ್ರ ನೀಡುವ ಈ ಸಾಮಾಜಿಕ ಕಾದಂಬರಿಯನ್ನು ವಿಶ್ವ ವಿಖ್ಯಾತ ಚಲನಚಿತ್ರ ನಿರ್ದೇಶಕ ಸತ್ಯಜಿತ ರಾಯ್ ಅವರು ಚಿತ್ರೀ ಕರಿಸಿದ್ದು, ಮೂಲ ಕಾದಂಬರಿಯ ಪೂರ್ಣ ಅನುವಾದವನ್ನು ಕನ್ನಡಕ್ಕೆ ಮೊದಲು ನೀಡಿದವರು ಅಹೋಬಲ ಶಂಕರ ಅವರು.

ವೈಶಾಖಮಾಸದ ದಿನ. ಸರ್ವಜಯಾ ಖಾರ ರುಬ್ಬುತ್ತಾ ಎಡಗೈಯಲ್ಲಿ ಒಂದು ಹೂವಿನ ಬುಟ್ಟಿ ಹಿಡಿದಿದ್ದಾಳೆ. (ಬಹಳ ದಿನಗಳಿಂದ ಆಕೆಗೆ ಹೂವು ಗಳೊಂದಿಗೆ ಸಂಪರ್ಕವೇನಿಲ್ಲವಾದರೂ ಕೇವಲ ಮಸಾಲೆಯನ್ನಿಡುವ ಪಾತ್ರೆ ಯಂತೆ ಉಪಯೋಗಿಸಲ್ಪಡುತ್ತಿದೆ ಬುಟ್ಟಿ) ಅದರಲ್ಲಿ ಮಸಾಲೆಯ ಪೊಟ್ಟಣ ವನ್ನು ಹುಡುಕಿದರೆ ಕಾಣಲಿಲ್ಲ. "ಅಯ್ಯೋ, ಈ ತುಂಟ ಮಸಾಲೆ ಪೊಟ್ಣ ಎಲ್ಲಿ ತಗೊಂಡು ಹೋದನಮ್ಮಾ, ಆಗಲೇ ? ಲೋ ಅಪೂ, ಎಲ್ಲಿ ಹೋದೆಯೊ ? ಅಡಿಗೆ ಮಾಡುವುದಕ್ಕೆ ಬಿಡುವುದಿಲ್ಲವಲ್ಲಾ ! ಆ ಮೇಲೆ ಬಂದು– ಅಮ್ಮಾ, ನನಗೆ ಹೊಟ್ಟೆ ಹಸಿಯುತ್ತೆ ಅಂತೀಯಾ !" ಎಂದು ಕೂಗಿದಳು.

ಅಪೂ ಎಲ್ಲೂ ಕಂಡುಬರಲಿಲ್ಲ. "ತಾಪ್ಪ, ಅಪೂ, ನನ್ನಪ್ಪ, ನನ್ನ ಚಿನ್ನ, ನೀನು ಒಳ್ಳೇ ಹುಡುಗ, ಯಾಕೋ ಹೀಗೆ ಹಿಂಸೆ ಮಾಡುತಿ ? ನೋಡು, ಹೊತ್ತು ಎಷ್ಟಾಗಿ ಹೋಯಿತು. ಎಲ್ಲಿದಿಯೋ ಬಾ, ಮತ್ತೆ."

ಈ ಬಾರಿ ಅಪೂ ಹೊರಕೋಣೆಯಿಂದ ಬಂದು, ಬಾಗಿಲ ಬಳಿ ನಿಂತ. ಸ್ವಲ್ಪ ಹಣಕಿ ನೋಡಿದ. ಆಗ ಅಮ್ಮನ ದೃಷ್ಟಿ ಅತ್ತ ಬಿದ್ದೊಡನೆ ಅವನ ತುಂಟನಗೆ ತುಂಬಿದ ಮುಖವು ಕಪ್ಪೆಯ ಚಿಪ್ಪಿನೊಳಗಿನ ಹುಳುವು ನೋಡಿದ ತಕ್ಷಣ ಮುಚ್ಚಿಟ್ಟುಕೊಳ್ಳುವಂತೆ ಬಾಗಿಲ ಹಿಂದೆ ಮತ್ತೆ ಮರೆಯಾಯಿತು.

ಸರ್ವಜಯಳಿಗೆ ಮಗನ ಈ ತರಹ ಚೇಷ್ಟೆಯು ಹೊಸದಲ್ಲ. ಅವನು ಒಂದೂವರೆ ವರ್ಷದ ಮಗುವಿದ್ದಾಗಿನಿಂದಲೂ ಹೀಗೆ ಕಣ್ಣುಮುಚ್ಚಾಲೆ

ಆಡುತ್ತಿದ್ದುದು ಅವಳಿಗೆ ಅತ್ಯಂತ ಪ್ರಿಯವಾಗಿದ್ದಿತು. ಆಗ ಅವನು ಈಗಿರುವದಕ್ಕಿಂತಲೂ ಎಷ್ಟೋ ಅಂದವಾಗಿದ್ದ. ಅವಳ ಮನಸ್ಸಿಗೆ ಆ ಮುಖ ಆಗಾಗ ನೆನಪಿಗೆ ಬರುತ್ತಲೇ ಇದೆ. ಗುಲಾಬಿ ಹೂವುಗಳಂತಹ ಗಲ್ಲಗಳನ್ನು ಅಪೂ ಅಮ್ಮನ ಕಡೆ ತಿರುಗಿಸಿದಾಗ, ಅವಳು ಮುತ್ತಿಡಲು ಬಾಗಿದ ಕೂಡಲೇ ಹಠಾತ್ತಾಗಿ ಮುಖ ತಿರುಗಿಸಿ ಅಮ್ಮನ ಬೆನ್ನ ಹಿಂದೆ ಮುಚ್ಚಿಟ್ಟುಕೊಳ್ಳುತ್ತಿದ್ದ. ಆಗ ಆಕೆ ನಗುತ್ತಾ 'ಅಯ್ಯೋ, ನನ್ನ ಕೂಸು ಎಲ್ಲಿದೆಯೆ? ನನ್ನ ಕಳ್ಳ ಕೂಸು ಎಲ್ಲಿ ಅಡಗಿದೆಯೊ' ಎಂದು ನಟಿಸುವಳು. ಮಗು ಖಿಲ್ಲೆಂದು ನಕ್ಕು ಮುಂದುಗಡೆ ಬಾಗಿ, ಆಮೇಲೆ ಪುನಃ ಅಮ್ಮನ ಕಂಠದಲ್ಲಿ ಮುಖವನ್ನು ಮುಚ್ಚಿಟ್ಟುಕೊಳ್ಳುವನು.

ಅವನು ಆಗ ತಾನೇ ಜಗತ್ತಿಗೆ ಹೊಸದಾಗಿ ಬಂದಿರುವವನು. ಜಗತ್ತಿನ ಅನಂತ ಆನಂದ ಭಂಡಾರದ ಕೇವಲ ಅಣುವೊಂದನ್ನು ಕಂಡುಕೊಂಡೇ ಅವನ ಸರಳ ಮನಸ್ಸು ಅದಷ್ಟನ್ನೇ ಲೋಭಿಯಂತೆ ಬಾರಿ ಬಾರಿಗೂ ರುಚಿ ನೋಡಿದರೂ ಆ ಆಸೆ ತೀರುತ್ತಿರಲಿಲ್ಲ. ಈ ಆಟದಲ್ಲಿ ಅವನ ಎಳೆಯ ಮೈಯೊಳಗಿನ ಶಕ್ತಿ ನಿತ್ರಾಣವಾಗುತ್ತದೆ. ಆಗ ಅವನು ಹಠಾತ್ತಾಗಿ ಆಟ ನಿಲ್ಲಿಸಿ, ಒಮ್ಮೆ ಆಕಳಿಸುವನು. 'ಎಷ್ಟು ಆಟ ಆಡುತ್ತಾನೊ ನನ್ನ ಚಿನ್ನ! ಇನ್ನೂ ಮೊನ್ನೆ ಜ್ಯೇಷ್ಠಕ್ಕೆ ಒಂದೂವರೆ ವರ್ಷ' ಎಂದು ಪರವಶಳಾಗಿ, ನಿದ್ದೆ ಹೋಗುತ್ತಿದ್ದ ಮಗುವಿನ ಮುಖವನ್ನು ಮುತ್ತಿನ ಮಳೆಯಿಂದ ತುಂಬಿಸಿಬಿಡುವಳು. ಆದರೆ ಮಗು ಮಾತ್ರ ತಾಯಿಯ ಈ ಗಾಢಪ್ರೀತಿಯ ಪ್ರದರ್ಶನವನ್ನು ಉದಾಸೀನ ಮಾಡಿ, ಅವಳ ತೊಡೆಯ ಮೇಲೆ ಮಲಗಿಬಿಡುವನು. ಕಾಡಿಗೆಯಿಂದಲಂಕೃತವಾದ ಅವನ ಮುಖವನ್ನು ನೋಡುತ್ತ ಅವಳಿಗೆ ಈ ಯೋಚನೆಯೂ ಬರುವುದು– "ಮಗು ದೊಡ್ಡವನಾದರೆ ಹೇಗಿರುತ್ತಾನೆ– ಎಂಟು ವರ್ಷದವನಾದಾಗ? ಆಗ ಏನು ಮಾಡುತ್ತಾನೆ?"

ಇಂದು ಅಪೂ ಎಂಟು ವರ್ಷದವನಾಗಿ ಅದೇ ಕಣ್ಣುಮುಚ್ಚಾಲೆಯಾಡುತ್ತಿದ್ದಾನೆ. ಅವಳೂ ಕೂತಲ್ಲಿಯೇ ಆ ದಿಕ್ಕು, ಈ ದಿಕ್ಕು ನೋಡುತ್ತ, "ಎಲ್ಲಿ ಹೋದ ಇವನು? ಕಾಣುವದೇ ಇಲ್ಲವಲ್ಲ?" ಎನ್ನುವಳು. ಅಪೂ 'ಅಮ್ಮನನ್ನು ಎಷ್ಟು ಸುಲಭವಾಗಿ ಆಟವಾಡಿಸಬಹುದು' ಎಂದುಕೊಳ್ಳುವನು. "ಹಾಗಾದರೆ ಅಡಿಗೆಗಿಡುಗೆ ಏನೂ ಬೇಡ ಇವತ್ತು. ಅಪೂ, ನೀನು

ಹೀಗೇ ಆಡುತ್ತಿರು, ಆ ಮೇಲೆ ಹೊಟ್ಟೆ ಹಸಿಯುತ್ತೆ ಅಂದರೆ ನೋಡು" ಎಂದು ಹೇಳುತ್ತಲೂ ಅಪೂ ಅದೇ ತುಂಟ ನಗೆಯನ್ನು ಪಸರಿಸುತ್ತ, ಆ ಮುಸಾಲೆಯ ಪೊಟ್ಟಣವನ್ನು ಅವ್ವನ ಮುಂದೆ ಇಡುವನು.

ಆಗ ಅವರಮ್ಮ "ಹೋಗು ಅಪೂ, ನಿಮ್ಮಕ್ಕ ಎಲ್ಲಿದ್ದಾಳೇ ಸ್ವಲ್ಪ ನೋಡು. ಹೋಗು, ಕೋಟೆಯ ಹತ್ತಿರ ಹೋಗಿ ಒಂದು ಕೂಗು ಹಾಕು. ಕೆಟ್ಟ ಹುಡುಗಿ ಎಲ್ಲೆಲ್ಲೋ ಅಲೆಯುತ್ತಾಳೆ. ಇವತ್ತು ಅವಳ ತಲೆಗೆ ನೀರು ಹಾಕಬೇಕು; ಹೋಗಪ್ಪ ನನ್ನ ಚಿನ್ನ" ಎಂದಳು. ತಾಯಿಯ ಈ ಪ್ರೀತಿಯ ಆದೇಶವನ್ನು ಪಾಲನೆಮಾಡಿ ಸುಪುತ್ರನೆನ್ನಿಸಿಕೊಳ್ಳಲು ಅಪೂ ಯಾವ ಪ್ರಯತ್ನವನ್ನೂ ಮಾಡಲಿಲ್ಲ.

ದುರ್ಗಾ ಮನೆಗೆ ಬಂದಳು. ಎಲ್ಲೋ ಹೋಗಿ ಅಲೆದಾಡಿಕೊಂಡು ಬಂದಿದಾಳೆ. ಕಾಲೆಲ್ಲಾ ಧೂಳಾಗಿದೆ. ತಲೆಯ ಕೂದಲೆಲ್ಲಾ ಕೆದರಿ ಬೈತಲೆ ಮುಚ್ಚಿಕೊಂಡು ಹೋಗಿದೆ. ಹೀಗೆಯೆ ಅವಳು. ಎಲ್ಲಿ ಯಾವ ಮರದಲ್ಲಿ ಹಣ್ಣು ಪಕ್ವವಾಗಿದೆ... ಯಾರ ಮನೆ ತೋಟದಲ್ಲಿ ಮಾವಿನಕಾಯಿ ಬಿಟ್ಟಿದೆ ! —ಇಂಥ ವಿಷಯದಲ್ಲಿಯೇ ಅವಳ ಗಮನ.

ಅವಳು ಒಳಗೆ ಬಂದೊಡನೆಯೇ ಸರ್ವಜಯಾ "ಬಂದೆಯಾ ? ಬಾ, ಅನ್ನ ಸಿದ್ಧವಾಗಿದೆ. ತಿಂದು ಉದ್ಧಾರ ಮಾಡುವಿಯಂತೆ. ಆ ಮೇಲೆ ಇನ್ನೆಲ್ಲಿ ಅಲೆದಾಡುವುದಕ್ಕೆ ಹೋಗಬೇಕೊ. ಅಲೆದಾಡಿಕೊಂಡು ಬಾ, ಹೋಗಿ ನೋಡು, ನಿನ್ನ ವಯಸ್ಸಿನ ಹುಡುಗಿಯರು ಹೇಗೆ ಮನೆಗಳಲ್ಲಿ ಕೆಲಸ ಮಾಡುತ್ತಾರೆಂತ. ಪೂಜೆ, ವ್ರತ ಕೂಡಾ ಮಾಡುತ್ತಾರೆ. ನೀನೊ, ಬೆಳಿಗ್ಗೆ ಹೊರಟವಳು ಕೈ ಬೀಸಿಕೊಂಡು, ಇಷ್ಟೊತ್ತಿಗಾದರೂ ಬಂದೆ, ನನ್ನ ಪುಣ್ಯ. ಏನದು ಸೆರಗಿನಲ್ಲಿ ಕಟ್ಟಿಕೊಂಡಿರುವುದು, ನಿನ್ನ ಧನ, ದೌಲತ್ತು ? ಬಿಚ್ಚು ಒಳ್ಳೆ ಮಾತಿನಲ್ಲಿ" ಎಂದು ದನಿಯೇರಿಸಿಳು.

ಅಷ್ಟರಲ್ಲಿ ಭುವನ ಮುಖೋಪಾಧ್ಯಾಯನ ದೊಡ್ಡ ಅತ್ತಿಗೆ, ಆಕೆಯ ಹಿಂದೆ ಅವರ ಮಗಳು ಟೂನೂ, ವೈದುನನ ಮಗ ಸತೂ, ಇನ್ನೂ ನಾಲ್ಕೈದು ಜನ ಹುಡುಗ-ಹುಡುಗಿಯರು ಎದುರು ಬಾಗಿಲಿನಿಂದ ಮನೆಯೊಳಗೆ ಬಂದರು. ಸರ್ವಜಯಾ 'ಏನು ಸಮಾಚಾರ' ಎಂದು ದಿಗಿಲು

ಗೊಂಡು ಕೇಳುವುದಕ್ಕೆ ಮುಂಚೆಯೇ ಟೂನೂ ಮತ್ತು ಸತೂ ಇಬ್ಬರೂ ಸೇರಿ, ದುರ್ಗಾಳ ಟಿನ್ನಿನ ಬೊಂಬೆಯ ಪೆಟ್ಟಿಗೆಯನ್ನು ಒಳಕೋಣೆಯಿಂದ ತಾವೇ ಹೊರಗೆ ತಂದು, ಜಗುಲಿಯ ಮೇಲೆ ಇಟ್ಟರು. ಟೂನೂ ಆ ಪೆಟ್ಟಿಗೆಯೊಳಗೆ ಕೈಹಾಕಿ, ತಡಕಾಡಿ ಒಂದು ಮಣಿಗಳ ಹಾರವನ್ನು ಹೊರತೆಗೆದು "ಇದೇ ನೋಡಮ್ಮ, ನನ್ನ ಹಾರ. ಇದನ್ನೇ ಅವಳಿಗೆ ಅವತ್ತು ಆಡುವುದಕ್ಕೆ ಕೊಟ್ಟಿದ್ದೆ. ಅಂದೇ ಅದನ್ನು ಕದ್ದು ತಂದಿದ್ದಾಳೆ ದುರ್ಗಾ" ಎಂದಳು.

ಸತೂ ತಾನೂ ಪೆಟ್ಟಿಗೆಯಲ್ಲಿ ಕೈಹಾಕಿ ನಾಲ್ಕೈದು ಎಳೆಯ ಮಾವಿನ ಕಾಯಿಗಳನ್ನು ಹೊರತೆಗೆದು "ಇಗೋ ನೋಡು, ದೊಡ್ಡಮ್ಮ, ನಮ್ಮ ಹಿತ್ತಿಲಿನ ಸೋನಾಮುಖಿ ಕಾಯಿಗಳು...... ಕಿತ್ತುಕೊಂಡು ಬಂದಿದ್ದಾಳೆ, ಕಳ್ಳೀ" ಎಂದನು.

ಒಂದೇ ಸಲ ಎರಡು ಕಳ್ಳತನಗಳೂ ಹೊರಬಿದ್ದು ಮುಖವೆಲ್ಲಾ ಬೆವೆತು ಹತಾಶಳಾಗಿ ದುರ್ಗಾ ಗೋಡೆಗೆ ಒರಗಿಕೊಂಡು ನಿಂತಳು. ಸರ್ವಜಯಾ ಮಗಳನ್ನು ಕುರಿತು "ಹೌದೇನೇ ?" ಎಂದು ಕೇಳಿದಳು.

ಆಗ ಭುವನ ಮುಖರ್ಜಿಗಳ ಅತ್ತಿಗೆ "ಇಲ್ಲಾ, ಅವಳು ತರಲಿಲ್ಲಾ. ನಾವು ಸುಳ್ಳು ಹೇಳುತ್ತಿದ್ದೇವೆ ಅಂದುಕೊಂಡೆಯೇನು ?" ಎಂದು ತನ್ನ ಬೆಳ್ಳಿಯ ಬಳೆಗಳ ಸದ್ದು ಮಾಡುತ್ತ ಕೈ ತಿರುಗಿಸಿದಳು.

ಸರ್ವಜಯಾ ಅಪ್ರತಿಭಳಾಗಿ "ಇಲ್ಲ, ಅತ್ತಿಗೇ, ನಿಮ್ಮ ಮಾತು ಸುಳ್ಳೆನ್ನಲಿಲ್ಲ, ಅವಳನ್ನು ಕೇಳಿದೆ. ಅಷ್ಟೆ."

"ಇನ್ನು ಕೇಳೋದು ಬೇರೆ ಏನೆ ? ಈ ಹುಡುಗಿ ಎಲ್ಲರ ಹಾಗೆ ಸೀದಾ ರೀತಿ ಬೆಳೆಯುವುದಿಲ್ಲ. ಹೇಳಿದ್ದೀನಿ ನಿನಗೆ. ಈ ವಯಸ್ಸಿನಲ್ಲೇ ಕಳ್ಳವಿದ್ಯೆ ಕಲಿತಳು ಅಂದರೆ ಮುಂದಕ್ಕೆ ಇನ್ನೂ ಏನೇನು ಕಲಿಯುತ್ತಾಳೆ ಯಾರಿಗೆ ಗೊತ್ತು ? ನಡಿಯೋ ಸತೂ, ತಗೊ ಆ ನಮ್ಮ ಮಾವಿನಕಾಯಿಗಳನ್ನು. ಅಲ್ಲಾ ! ಇಂತಹ ಬೇವಾರ್ಸಿ ಪೋರಿಗೆ ಅವನ್ನು ನೋಡುವುದಕ್ಕೂ ಯೋಗ್ಯತೆ ಬೇಕಲ್ಲ ? ಟೂನೂ, ಮಾಲೆಯನ್ನು ತಗೋ, ಹೋಗೋಣ" ಎಂದು ಒದರಿದಳು.

ಸರ್ವಜಯಾಳಿಗೆ ಕೋಪ ತಡೆಯಲಾಗಲಿಲ್ಲ. "ಹಾರದ ವಿಷಯ ನನಗೆ ಗೊತ್ತಿಲ್ಲ. ಅತ್ತಿಗೇ. ಆದರೆ ಆ ಮಾವಿನಕಾಯಿಗಳು— ಯಾವ ಮರದ ಕೆಳಗೆ ಬಿದ್ದದ್ದು ಅನ್ನುವದಕ್ಕೆ ಅದರ ಮೇಲೇನಾದರೂ ಹೆಸರು ಬರೆದಿದೆಯೇ? ಅದು ಸಣ್ಣ ಹುಡುಗಿ, ಏನೊ ಕೈಲಿ ಹಿಡಿದುಕೊಂಡು—"

ದೊಡ್ಡ ಅತ್ತಿಗೆ ಕಿಡಿ ಕಾರುತ್ತಾ "ಅಹಾಹಾ ! ಎಷ್ಟು ಬುದ್ಧಿವಂತಿಕೆ ಮಾಡುತ್ತೀಯೆ ? ಇರಬಹುದು, ಮಾವಿನಕಾಯಿಗಳ ಮೇಲೆ ಹೆಸರು ಬರೆದಿಲ್ಲ ಅನ್ನೋಣ. ನಿಮ್ಮ ಯಾವ ತೋಟದಿಂದ ಅವನ್ನ ತಂದಳು ? ಅದನ್ನಾದರೂ ಹೇಳತೀಯೊ ? ಹಾಗೇನೇ ರೂಪಾಯಿಗಳ ಮೇಲೂ ಯಾರ ಹೆಸರೂ ಬರೆದಿರುವುದಿಲ್ಲ. ಹಾಗೆಂತ ಬಾಚಿಕೊಂಡು ಬರಬಹುದಲ್ಲ ? ಹೆಸರಂತೆ ಹೆಸರು ! ಈಗಾಗಲೇ ವರ್ಷದ ಮೇಲಾಯಿತು. ಇವತ್ತು ಕೊಡುತೇನೆ... ನಾಳೆ ಅಂತಾ ಹೇಳತಾ ಇದ್ದು. ಇನ್ನೊಂದು ದಿನ ಬರುತ್ತೇನೆ... ತಡಿ... ರೂಪಾಯಿ ಎಣಿಸಲೇಬೇಕು. ತಿಳೀತಾ ?" ಎಂದು ಗರ್ಜಿಸುತ್ತ ತನ್ನ ದಳ, ಬಲ ಸಮೇತ ಹೊರಟು ಹೋದಳು.

ಅವಮಾನ, ದುಃಖಗಳಿಂದ ಸರ್ವಜಯಾಳಿಗೆ ಕಣ್ಣಲ್ಲಿ ನೀರು ತುಂಬಿತು. ತಕ್ಷಣ ವಿಪರಿತ ರೋಷದಿಂದ ದುರ್ಗಾಳ ಮೇಲೆ ಬಿದ್ದು, ಅವಳ ಕೆದರಿದ ಕೂದಲನ್ನು ಗಟ್ಟಿಯಾಗಿ ಹಿಡಿದು ಎಳೆಯುತ್ತ ಮುಸುರೆಯಾದ ಕೈಯಿಂದಲೇ ಪಟ್ಟೆಂದು ಚೆನ್ನಾಗಿ ಬೆನ್ನಮೇಲೆ ಬಾರಿಸಿದಳು. ಕೆನ್ನೆಯನ್ನು ಚೆನ್ನಾಗಿ ಚಿವುಟಿದಳು. "ಆಪತ್ಕಾಲದಲ್ಲಿ ಎಂತಹಳು ಹುಟ್ಟಿದೆಯೇ ನೀನೂ— ನೀನು ಸತ್ತರೂ ಹೋಗದು ಅವಮಾನ. ನಡಿ, ಮನೆಬಿಟ್ಟು ಹೋಗು. ಈಗಿಂದೀಗಲೇ ಹೊರಡು !"

ದುರ್ಗಾ ಬಿಕ್ಕಿ ಬಿಕ್ಕಿ ಅಳುತ್ತಾ, ಆರ್ತಳಾಗಿ ಹಿತ್ತಲ ಬಾಗಿಲನ್ನು ದಾಟಿ ಹೊರಗೆ ಹೊರಟಳು. ಅವಳ ಕೆದರಿದ ಕೂದಲಿನಲ್ಲಿ ಒಂದೆರಡು ಎಳೆಗಳು ಸರ್ವಜಯಾಳ ಕೈಯಲ್ಲೇ ಉಳಿದುವು.

ಅಪೂ ಅವಾಕ್ಕಾಗಿ ನಡೆದುದೆಲ್ಲವನ್ನೂ ನೋಡುತ್ತಿದ್ದ. ಹಾರದ ವಿಷಯ ಅವನಿಗೂ ತಿಳಿಯದು. ಆದರೂ ಅಕ್ಕನು ಮಾವಿನಕಾಯಿಗಳನ್ನು ಮಾತ್ರ ಕಿತ್ತು ತರದೇ, ಕೆಳಗೆ ಬಿದ್ದವುಗಳನ್ನು ಆರಿಸಿ ತಂದದ್ದು ಅವನಿಗೆ ಗೊತ್ತು.

ಅವಳ ಕೂದಲನ್ನು ಹಾಗೆ ಕತ್ತರಿದ್ದು ನೋಡಿ ಅಪೂವಿಗೆ ಅಮ್ಮನ ಮೇಲೆ ಬಹಳ ಕೋಪ ಬಂದಿತು. ಯಾವಾಗಲಾದರೂ ಅಕ್ಕನ ತಲೆಯ ಹತ್ತಿರ ಮುಖವಿಟ್ಟು ಕುಳಿತಿದ್ದಾಗ ಅವಳ ಕೆದರಿದ ಕೂದಲೆಳೆಗಳು ಗಾಳಿಗೆ ಹಾರಿದರೆ ಅವನಿಗೆ ಒಂದು ಬಗೆಯಾದ ಮಮತೆ ಉಕ್ಕಿಬರುತ್ತಿತ್ತು. 'ಏನಾದರೂ ಮಾಡಿ ಅಕ್ಕನ ದುಃಖವನ್ನು ಅಳಿಸಿ ಹಾಕಿಬಿಡಬೇಕು.' ಎಂಬ ಒಳ ಆಸೆ ಏರಿಬಂತು.

ಸಾಯಂಕಾಲದವರೆಗೂ ಅಕ್ಕ ಬಾರದೇ ಇದ್ದಾಗ, ಅಪೂ ಅವಳನ್ನು ಹುಡುಕಿಕೊಂಡು, ತಾವಿಬ್ಬರೂ ಅಲೆದಾಡುವ ಎಲ್ಲ ತಾಣಗಳಿಗೂ ಹೋಗಿ ಬಂದ. ಸಿಕ್ಕಲಿಲ್ಲ. ದಣಿದು ಬಂದು ಬೇಗ ನಿದ್ರೆ ಹತ್ತಿದ ಅವನಿಗೆ ರಾತ್ರಿಯಲ್ಲಿ ಎಚ್ಚರವಾಯಿತು. ಮಗ್ಗುಲಲ್ಲಿ ತಾಯಿ ಕಾಣಲಿಲ್ಲ. ಆದರೆ ಅನತಿ ದೂರ ದಲ್ಲಿ ಅಕ್ಕ ಮಲಗಿದ್ದಾಳೆ. ತೆವಳಿಕೊಂಡು ಅವಳ ಬಳಿ ಸಾರಿ, ಎಬ್ಬಿಸುತ್ತ "ಬಹಳ ನೋವಾಗುತ್ತಾ, ಅಕ್ಕ ? ಎಲ್ಲಿ ಹೊಡೆದಳು ?" ಎಂದ. ದುರ್ಗಾ " ನನ್ನ ಕಿವಿಯ ಹತ್ತಿರ. ಇಗೋ, ರಕ್ತ ಬರುತಾ ಇತ್ತು. ಈಗಲೂ ಉರೀತಾಯಿದೆ " ಎಂದಳು.

"ಇಲ್ಲಿಯೇ? ಹೌದು ಕಣೇ, ಸ್ವಲ್ಪ ಕರ್ಪೂರದ ಎಣ್ಣೆ ಹಚ್ಚಲೇನೇ ?" ಎಂದ ಅಪೂ.

"ಬೇಡ ಬಿಡೊ. ಅಂದ ಹಾಗೆ ನಾಳೆ ಪಾರಿತರ ತೋಟಕ್ಕೆ ಸಾಯಂಕಾಲ ಹೋಗೋಣ. ಪನ್ನೇರಳೆ ಹಣ್ಣು ಇಷ್ಟಿಷ್ಟು ದೊಡ್ಡದು ಬಿಟ್ಟಿದೆ. ಯಾರಿಗೂ ಹೇಳಬೇಡ. ನಾನು ಇವತ್ತು ಮಧ್ಯಾನ್ಹ ಹೊಟ್ಟೆತುಂಬ ತಿಂದೆ. ಬೆಲ್ಲ, ಕಣೋ" ಎಂದು ನುಡಿದಳು ದುರ್ಗಾ.

೨

ಗ್ರಾಮದ ಪನ್ಸಾರೆ ಗುರುಮಹಾಶಯನು ಮನೆಯಲ್ಲಿಯೇ ಒಂದು ಸಣ್ಣ ಪನ್ಸಾರೆ ಅಂಗಡಿ ಇಟ್ಟುಕೊಂಡಿದ್ದಾನೆ ಮತ್ತು ಅಂಗಡಿಯ ಜೊತೆ ಯಲ್ಲಿಯೇ ಪಾಠಶಾಲೆ ಕೂಡಾ ಇದೆ. ಒಂದು ಬೆತ್ತದ ಹೊರತು ಪಾಠಶಾಲೆ ಯಲ್ಲಿ ವಿದ್ಯಾದಾನಕ್ಕೆ ವಿಶೇಷ ಸಲಕರಣೆಯೇನೂ ಇಲ್ಲ.

ಪುಷ್ಯಮಾಸದ ದಿನ. ಅಪೂ ಬೆಳಿಗ್ಗೆ ಎದ್ದು ಹಾಸಿಗೆ ಸುತ್ತಿ ಅದರ ಮೇಲೆಯೇ ಆಲಸ್ಯಭಾವದಿಂದ ಒರಗಿದ್ದನು. ಆಗ ಅಮ್ಮ ಬಂದು "ಅಪೂ, ಏಳೊ ಬೇಗ. ಇವತ್ತು ನೀನು ಪಾಠಶಾಲೆಗೆ ಹೋಗಬೇಕು. ಅಪ್ಪ ನಿನ್ನನ್ನು ಜೊತೆಯಲ್ಲಿ ಕರೆದುಕೊಂಡು ಹೋಗ್ತಾರೆ" ಎಂದಳು.

ಅಪೂನ ಅಭಿಪ್ರಾಯದಲ್ಲಿ, ಯಾರು ವಿಪರೀತ ದುಷ್ಟ ಹುಡುಗರೋ, ಯಾರು ತಾಯಿ-ತಂದೆಯರ ಮಾತನ್ನು ಕೇಳುವುದಿಲ್ಲವೊ ಮತ್ತು ಅಕ್ಕ ತಂಗಿಯರ ಜೊತೆಯಲ್ಲಿ ಯಾರು ಸದಾ ಜಗಳಾಡುತ್ತಾರೋ ಅಂತಹವರನ್ನು ಮಾತ್ರ ಪಾಠಶಾಲೆಗೆ ಕಳಿಸಬೇಕು ಎಂದಿತ್ತು. ಆದರೆ ಅವನೇನೂ ಹಾಗೆ ಎಂದಿಗೂ ಮಾಡಿದ್ದಿಲ್ಲ.

ಯಾವಾಗ ಅಪ್ಪನೇ ಬಂದು ಎಬ್ಬಿಸಿ ಕರೆದನೋ, ಅಪೂ ಏಳಲೇ ಬೇಕಾಯಿತು. ರೇಶಿಮೆಯಂತೆ ನವುರಾದ ಅವನ ತಲೆಗೂದಲನ್ನು ಸೊಗಸಾಗಿ ಬಾಚಿ, ಕೈಯಲ್ಲಿ ಸ್ಲೇಟು-ಪುಸ್ತಕಗಳನ್ನು ಕೊಟ್ಟು ಸರ್ವಜಯಾ ಅವನನ್ನು ಸಿದ್ಧಗೊಳಿಸಿದಳು. ಹರಿಹರರಾಯನು ಅವನನ್ನು ಪಾಠಶಾಲೆಗೆ ಕರೆದುಕೊಂಡು ಬಂದು ಒಳಗೆ ಕೂಡ್ರಿಸಿ "ಮತ್ತೆ ಶಾಲೆ ಬಿಡುವ ಹೊತ್ತಿಗೆ ಬಂದು ಮನೆಗೆ ಕರೆದುಕೊಂಡು ಹೋಗ್ತೇನೆ, ಅಪೂ. ಗುರುಗಳು ಹೇಳಿದ ಹಾಗೆ ಕೇಳಬೇಕು, ತುಂಟತನ ಮಾಡಕೂಡದು, ಏನೂ ?" ಎಂದು ಎಚ್ಚರಿಸಿ ಹೋದನು.

ಪಾಠಶಾಲೆ ನಡೆಸುತ್ತಿದ್ದ ಸ್ಥಳಕ್ಕೆ ಗೋಡೆಯಾಗಲೀ, ಬೇಲಿಯಾಗಲೀ ಇಲ್ಲ. ನಾಲ್ಕೂ ಕಡೆ ಬಯಲು, ಮೇಲೆ ಮಾತ್ರ ಕುಂಬಾರ ಹೆಂಚಿನ ಛಾವಣಿ. ಪಾಠಶಾಲೆಯ ಸುತ್ತಲೂ ಕಾಡು. ಹತ್ತಿರ ಯಾರ ಮನೆಯೂ ಇಲ್ಲ.

ಗುರುಮಹಾಶಯರು ಒಂದು ಕಂಬಕ್ಕೆ ಒರಗಿಕೊಂಡು ಒಂದು ತಾಳೆಗರಿಯ ಚಾಪೆಯ ಮೇಲೆ ಕೂತಿದ್ದಾರೆ. ತಲೆಗೆ ಹಾಕಿದ್ದ ಎಣ್ಣೆಯಿಂದಾಗಿ, ಆ ಕಂಬದ ಭಾಗವು ಕರೆಹಿಡಿದು ಹೋಗಿದೆ.

ಎಂಟು-ಹತ್ತು ಹುಡುಗರು ತಮ್ಮ ಮನೆಯಿಂದ ತಂದ ಚಾಪೆಗಳ ಮೇಲೆ ಕುಳಿತು, ನಾನಾಸ್ವರಗಳಲ್ಲಿ ಗಟ್ಟಿಯಾಗಿ ಪಾಠಗಳನ್ನೋದುತ್ತಾ, ಬಾಯಿಪಾಠ ಮಾಡುತ್ತಿದ್ದಾರೆ. ಮಧ್ಯೆ ಮಧ್ಯೆ ಗುರುಮಹಾಶಯರ ಕೂಗು

ಕೇಳಬರುತ್ತಿದೆ. "ಲೋ ಕ್ಯಾಬಲಾ, ಅವನ ಸ್ಲೇಟಿನ ಕಡೆ ಏನು ನೋಡುತೀಯೋ ? ಬೇಕೇನು ಬೆತ್ತದ ಏಟು ? ಲೋ ಟೂನೂ, ಎಷ್ಟು ಸಲವೊ, ಚೌಕ ಒದ್ದೆ ಮಾಡಿಕೊಳ್ಳೋದು ? ಇನ್ನೊಂದು ಸಲ ಮೇಲಕ್ಕೆದ್ದಿ ಅಂದರೆ ನೋಡತಾ ಇರು, ಕತ್ತೇ."

ಸಾಯಂಕಾಲದ ಹೊತ್ತು, ಯಾರಾದರೂ ಹರಟೆ ಹೊಡೆಯಲು ಬರುತ್ತಾರೆ. ಪಕ್ಕದ ಅಗ್ರಹಾರದ ಸನ್ಯಾಲನಿಗೆ ದೇಶಾಂತರ ಪ್ರವಾಸವೆಂದರೆ ಬಹಳ ಇಷ್ಟ. ಸಂಸಾರವನ್ನು ಕಟ್ಟಿಕೊಂಡು ಯಾವುದಾದರೂ ಯಾತ್ರೆಗೆ ಸದಾ ಹೋಗುತ್ತಾನೆ. ಊರಲ್ಲಿರುವಾಗ ಸ್ವಂತ ಜಮೀನಿನ ಚಂಡೀ ಮಂಟಪದಲ್ಲಿ ಕುಳಿತು ಹುಕ್ಕಾಸೇವನೆ ಮಾಡುವುದನ್ನು ಬಿಟ್ಟರೆ ಬೇರಾವ ಉದ್ಯೋಗವೂ ಇಲ್ಲ ಅವನಿಗೆ. ಅವನ ದೇಶಾಂತರಗಳ ವರ್ಣನೆಗಳನ್ನು ಕೇಳಕೇಳುತ್ತ ಅಪೂವಿನ ವಿಶಾಲವಾದ ಕಣ್ಣುಗಳು ಉತ್ಸಾಹದಿಂದ ಹೊಳೆಯುತ್ತವೆ. ಸ್ಲೇಟು-ಪುಸ್ತಕಗಳನ್ನು ಮುಚ್ಚಿಬಿಟ್ಟು, ಅವರ ಮಾತುಕತೆಯ ಸ್ವಾರಸ್ಯವನ್ನು ಹೀರುತ್ತಾ ಕೂತುಬಿಡುವನು.

ಮರಗಿಡಗಳ ಅಡಿಯಲ್ಲಿ ಸದಾ ಅಲೆದಾಡುವ ಆ ಹುಡುಗನಿಗೆ ಅದಷ್ಟೇ ಪರಿಚಿತ ಪ್ರದೇಶ. ಸನ್ಯಾಲನು ವರ್ಣಿಸುವ ಪ್ರಪಂಚವೆಲ್ಲಾ, ಅಪರಿಚಿತವಾದ, ಮೇರೆಯಿಲ್ಲದ ಸಮುದ್ರದಂತೆ !

ಆದರೆ ಈ ಪಾಠಶಾಲೆಯನ್ನು ನಂಬಿಯೇ ಅಪೂ ವಿದ್ಯಾವಂತನಾಗಬೇಕಾಗಿರಲಿಲ್ಲ. ಸ್ವತಃ ಅಧ್ಯಾಪನ-ಪ್ರವಚನ ವೃತ್ತಿಯುವನಾದ ಅವನ ತಂದೆ ಊರಲ್ಲಿದ್ದ ಸಮಯದಲ್ಲೆಲ್ಲ ಮಗನನ್ನು ಎದುರು ಕೂರಿಸಿಕೊಂಡು, ಓದು-ಬರೆಹ ಕಲಿಸುತ್ತಿದ್ದನು. ಅಪೂವಿನ ಬುದ್ಧಿ ತೀಕ್ಷ್ಣ. ನೀರು ಕುಡಿದಂತೆ ಓದಿ, ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲವನಾಗಿದ್ದ. ತಂದೆ ಆಗಾಗ ಅವನನ್ನು ಗಂಗೂಲಿಯವರ-ಮನೆಯ ಚಂಡೀ ಮಂಟಪಕ್ಕೆ ಕೊಂಡುಹೋಗಿ, ಅಲ್ಲಿ ಸೇರುತ್ತಿದ್ದ ವಯಸ್ಕರ ಕೂಟದಲ್ಲಿ, ಅವರೆದುರಿಗೆ ರಾಮಾಯಣವನ್ನೋ, ಜನಪದ ಹಾಡುಗಳನ್ನೋ ಓದಲು ಅಪೂವಿಗೆ ಹೇಳುತ್ತಿದ್ದ. ಅವನ ಓದನ್ನು ಕೇಳಿ ಮುದುಕರು ಹೊಗಳುವುದುಂಟು.

ದೀನೂ ಚಟ್ಟೋಪಾಧ್ಯಾಯನು "ನನ್ನ ಮೊಮ್ಮಗನೂ ಇದ್ದಾನೆ, ಅವನಿಗೂ ಈ ಹುಡುಗನದೇ ವಯಸ್ಸು. ಇಷ್ಟರ ವರೆಗೆ ಎರಡು ಬಾಲ

ಬೋಧೆಗಳನ್ನು ಹರಿದು ಹಾಕಿದ. ಇಷ್ಟು ದಿನವಾದರೂ ಅಕ್ಷರಗಳನ್ನು ಗುರುತಿಸಲಾರ. ನೇಗಿಲವೇ ಅವನಿಗೆ ಗತಿ" ಎನ್ನುವನು. ಆಗ ಹರಿಹರನು ಪುತ್ರಗರ್ವದಿಂದ ಪುಳಕಿತನಾಗಿ ಹೋಗುವನು. ಮನಸ್ಸಿನಲ್ಲಿಯೆ 'ಆದದ್ದೇನು ಮುದುಕಯ್ಯ ? ಏನು ಕಡಿಮೆ ಚೆನ್ನಾಗಿ ಚಕ್ರಬಡ್ಡಿ ಲೇವಾದೇವಿ ಮಾಡಿ ಇಟ್ಟಿರುವ ಗಂಟಿರುವ ವರೆಗೂ ? ನಾವಂತೂ ಬಡವರು. ಎಷ್ಟಾದರೂ ಪಂಡಿತ ವಂಶ, ವಿದ್ಯೆಯೇ ನಮ್ಮ ಹಣ. ನಮ್ಮಪ್ಪ ತಾಳೆ ಗರಿಗಳ ಕಟ್ಟನ್ನ ವ್ಯರ್ಥವಾಗೇನೂ ಇಡಲಿಲ್ಲ ?' ಎಂದುಕೊಳ್ಳುವನು.

ಅವರದು ಅನೇಕ ವರ್ಷಗಳ ಜೀರ್ಣ, ಪುರಾತನವಾದ ಇಟ್ಟಿಗೆಯ ಮನೆ. ಅಲ್ಲಿ ಹಲವು ಪೆಟ್ಟಿಗೆಗಳಿದ್ದು, ವಿಶೇಷ ವಾಸನೆಯನ್ನು ಬೀರುತ್ತಿದ್ದುವು. ಆ ವಾಸನೆಯು ಯಾವುದೋ ಅತೀತ ಕಾಲದ ಸಂಗತಿಗಳನ್ನು ಮನಸ್ಸಿಗೆ ತರುತ್ತಿತ್ತು. ಮನೆಯ ಹಿಂದಿನ ಕೋಣೆಯಲ್ಲಿ ಮೇಲು ಛಾವಣಿಗೆ ಸೇರಿದಂತಿದ್ದ ಗೂಡಿನಲ್ಲಿ ದೊಡ್ಡ ತೇಗದ ಮರದ ಕರಂಡಿಕೆಯಲ್ಲಿ ಹಲವಾರು ತಾಳೆಯ ಗರಿಗಳ ಕಟ್ಟು ಮತ್ತು ಖಾತಾ ಪತ್ರಗಳಿದ್ದುವು. ಅವು ಅವನ ಅಜ್ಜ ರಾಮಚಂದ್ರ ತರ್ಕಾಲಂಕಾರನಿಗೆ ಸೇರಿದುವು. ಎಂದಾದರೊಮ್ಮೆ ಅವುಗಳನ್ನು ಕೆಳಗಿಳಿಸಿ ಅವುಗಳಲ್ಲಿ ಏನೇನಿದೆಯೊ ನೋಡಬೇಕೆಂಬ ಆಶೆ ಅಪೂನಿಗೆ.

ಅವರ ಮನೆಯ ಕಿಟಕಿಯಿಂದ ನೋಡಿದರೆ ಸ್ವಲ್ಪ ದೂರದಲ್ಲಿಯೆ ಒಂದು ವಿಶಾಲವಾದ ಕಾಡು ಆರಂಭವಾಗಿದೆ. ಹಸಿರಿನ ಸಮುದ್ರದ ಅಲೆಗಳಂತೆ ಅಲ್ಲಿಯ ಗಿಡಗಳ ತುದಿಗಳು ಕಣ್ಣಿಗೆ ಬೀಳುತ್ತವೆ. ಮನೆಯ ಮತ್ತೊಂದು ದಿಕ್ಕಿನಲ್ಲಿ ನದೀ ತೀರವಿದೆ. ಅಪೂ ತನ್ನ ಅಕ್ಕನೊಂದಿಗೆ ಈ ವನ, ಈ ತೀರದಲ್ಲಿ ಎಷ್ಟೋ ದೂರ ಅಲೆದಾಡಿದ್ದಾನೆ. ಅಲ್ಲಿಯ ಹಸುರಿನ ಸ್ಪರ್ಶದಿಂದ ಅವರಿಬ್ಬರ ಮನಸ್ಸು ಮಾರು ಹೋಗಿದೆ. ಅದರಲ್ಲಿ ಅವರು ತಾದಾತ್ಮ್ಯವನ್ನು ಹೊಂದಿದ್ದಾರೆ.

ಆ ವನದಲ್ಲಿ ತಿರುಗಾಡುತ್ತಿದ್ದಾಗ ಅಪೂ ಒಮ್ಮೆ ಒಂದು ಬೆತ್ತದ ಡೊಂಕ ಛಡಿಯನ್ನು ತಂದಿದ್ದ. ಅವನ ಬದುಕಿನಲ್ಲಿ ಅದೊಂದು ಅದ್ಭುತವಾದ ಪದಾರ್ಥ. ಚೆನ್ನಾಗಿ ಒಣಗಿದ, ಹಗುರಾದ, ಬುಡದ ಕಡೆ ದಪ್ಪವಾಗಿದ್ದು ತುದಿಯ ಕಡೆ ತೆಳ್ಳಗಿರುವ ಆ ಡೊಂಕಾದ ಛಡಿಯನ್ನು ಹಿಡಿದನೆಂದರೆ ಅವನಲ್ಲಿ

ಅದ್ಭುತ ಕಲ್ಪನೆಗಳು ಜಾಗರಿತವಾಗುತ್ತಿದ್ದುವು. ಅದನ್ನು ಹಿಡಿದುಕೊಂಡು ಆ ವನದಲ್ಲಿ ಸ್ವೇಚ್ಛೆಯಾಗಿ ತಿರುಗಾಡುತ್ತಿದ್ದ. ಒಂದು ಸಲ ರಾಜಪುತ್ರನಂತೆ, ಮತ್ತೊಂದು ಸಲ ಪ್ರಯಾಣಿಕನಂತೆ, ಇಲ್ಲವೆ ಮಹಾಭಾರತದ ಅರ್ಜುನನಂತೆ ಕಲ್ಪನೆ ಮಾಡಿಕೊಂಡು, ಇಷ್ಟ ಬಂದಂತೆ ಕಾಲ್ಪನಿಕ ಘಟನೆಗಳನ್ನು ಸೃಷ್ಟಿಸಿಕೊಂಡು ಆನಂದ ಪಡುತ್ತಿದ್ದ.

ಹಾಗೆ ತಾನು ತಿರುಗಾಡುವುದು ಯಾರಿಗೂ ತಿಳಿಯಕೂಡದೆಂದು ಅವನ ಕಾತರ ! ಅದಕ್ಕೆಂದೇ ಜನ ಸಂಚಾರವಿಲ್ಲದ ಆ ಅಡವಿಯಲ್ಲಿ ಹೋಗುತ್ತಿದ್ದ. ಒಂದೊಂದು ಸಲ ಮನೆಯ ಹಿತ್ತಲಿನ ಹುಣಿಸೆಯ ಗಿಡದ ಬುಡದಲ್ಲೂ ಕೂಡುತ್ತಿದ್ದ. ಆಕಸ್ಮಾತ್ ಯಾರಾದರೂ ಒಂದು ಸಲ ಬಂದರೆ, ತಕ್ಷಣ ನಾಲಿಗೆ ಕಚ್ಚಿಕೊಂಡು, ಛಡಿಯನ್ನು ಒತ್ತಟ್ಟಿಗೆ ಬಿಸಾಡಿ, ಬೇರೊಂದೆಡೆ ಮುಖ ಮಾಡಿ ನಿಲ್ಲುವನು. ಆದರೆ ದುರ್ಗಾಗೆ ಮಾತ್ರ ಆ ವಿಷಯ ಗೊತ್ತು. ಅಥವಾ ಅಕ್ಕನ ಹತ್ತಿರ ಅದನ್ನು ಬಚ್ಚಿಟ್ಟು ಪ್ರಯೋಜನವೇನು ? ಆದರೂ 'ಅಮ್ಮನಿಗೆ ಈ ವಿಷಯ ಹೇಳಕೂಡದು ಅಕ್ಕ' ಎಂದು ಅವಳಲ್ಲಿ ಅಂಗಲಾಚಿದ್ದನು.

[೩]

ಶಿಷ್ಯ ಮನೆತನಗಳಿರುವ ಊರುಗಳಿಗೆ ಓಡಾಡಿಯೇ ಸಂಪಾದನೆ ಮಾಡಬೇಕಾಗಿದ್ದ ಹರಿಹರರಾಯನು ಊರಲ್ಲಿ ಇರುವದೇ ಕಡಿಮೆ. ಪರವೂರಿಂದಲೇ ದುಡ್ಡು ಕಳಿಸುವುದುಂಟು. ಆ ಸಲ ಸಂಚಾರಕ್ಕೆ ಹೋದ ಮೇಲೆ ಐದು ರೂಪಾಯಿ ಕಳಿಸಿದ್ದ. ಅದಾದ ಮೇಲೆ ದುಡ್ಡೂ ಇಲ್ಲ, ಪತ್ರವೂ ಇಲ್ಲ. ಪ್ರತಿದಿನ ಬೆಳಿಗ್ಗೆ ಸರ್ವಜಯಾ 'ಇವತ್ತು ಖಂಡಿತ ದುಡ್ಡು ಬರುತ್ತೆ' ಎಂದುಕೊಳ್ಳುವಳು. ಅಪೂ ಅಮ್ಮನ ಆಣತಿಯಂತೆ ಅನ್ನದಾರಾಯರ ಚಂಡೀಮಂಟಪದಲ್ಲಿ ಪೋಸ್ಟ್ ಜವಾನನಿಗಾಗಿ ಕಾದು ಕೂತಿರುತ್ತಾನೆ. ಆಗ ಮಳೆ ಬೀಳತೊಡಗುತ್ತದೆ. ಆಕಾಶದಲ್ಲಿ ಶಬ್ದವಾದರೆ ಅವನಿಗೆ ಭಯವಾಗುತ್ತದೆ. ಮಿಂಚು ಹೊಳೆದಾಗ ಮನಸ್ಸಿನಲ್ಲಿ 'ದೇವರು ಕತ್ತಿ ಮಸೆಯುತ್ತಾನೆ, ಅದಕ್ಕೇ ಆ ಮಿಂಚು ! ಈ ಸಲ ಖಂಡಿತ ಗರ್ಜನೆ ಮಾಡುತ್ತಾನೆ' ಎಂದುಕೊಂಡು ಕಿವಿಗಳಲ್ಲಿ ಬೆರಳನ್ನಿಟ್ಟುಕೊಳ್ಳುತ್ತಾನೆ.

ಮನೆಗೆ ಹಿಂತಿರುಗಿ ನೋಡುವಲ್ಲಿ ಅವರಮ್ಮನೂ ಅಕ್ಕನೂ ಮಳೆಯಲ್ಲಿ ನೆನೆದು, ನೆನೆದು ದಂಟಿನ ಸೊಪ್ಪಿನ ರಾಸಿಯನ್ನು ಅಡಿಗೆಯ ಮನೆಯ ಬಾಗಿಲಲ್ಲಿ ಹಾಕಿದ್ದರು.

ಅಪೂ "ಎಲ್ಲಿಂದ ತಂದಿರಿ ? ಓಹ್ ಎಷ್ಟೊಂದು !" ಎಂದನು.

ದುರ್ಗಾ ನಗುತ್ತ "ಹೂಂ. ನೀನಂತೂ ಕೂತುಕೊಂಡು ಆರಾಮವಾಗಿರು. ನಾವು ಆ ಸೀಬೇ ಮರದ ಹತ್ತಿರ ಬಿದ್ದುದನ್ನು ಆರಿಸಿ ತಂದೆವು. ಅಲ್ಲಿ ಇಷ್ಟು ತನಕಾ ನೀರು. ನೀನು ಹೋಗು ನೋಡೋಣ" ಎಂದು ನುಡಿದಳು.

ಬೆಳಿಗ್ಗೆ ಸರ್ವಜಯಾ ಹೊಳೆಯ ಹತ್ತಿರ ಹೋದಾಗ ನಾಪಿತನ ಹೆಂಡತಿ ಸಿಕ್ಕಿದ್ದಳು. ಸರ್ವಜಯಾ ತನ್ನ ಉಡಿಯಿಂದ ಕಂಚಿನ ತಟ್ಟೆಯೊಂದನ್ನು ತೆಗೆದು ತೋರಿಸುತ್ತ "ಇಲ್ಲಿ ನೋಡೇ, ಅವತ್ತು ನೀ ಹೇಳಿದ್ದೆಯಲ್ಲ ? ಇದೇ ಆ ತಟ್ಟೆ. ಒಳ್ಳೆ ಕಂಚು. ನಮಗೂ ಇದು ಉಪಯೋಗವಿಲ್ಲ ಅಂತ ತಂದೆ. ತಗೊಂಡು ಹೋಗು. ಇದು ನಮ್ಮ ತೌರುಮನೆಯವರು ಕೊಟ್ಟದ್ದು. ಇಂಥಾದ್ದು ಬೇಕು ಅಂದರೂ ಸಿಗುವುದಿಲ್ಲ ಈಗ" ಎಂದಳು.

ಸ್ವಲ್ಪ ಚೌಕಾಶಿ ಮಾಡಿದ ಮೇಲೆ, ನಾಪಿತನ ಹೆಂಡತಿ ತನ್ನ ಸೀರೆಯಂಚಿನಿಂದ ನಗದು ಎಂಟಾಣೆ ನಾಣ್ಯವೊಂದನ್ನು ತೆಗೆದುಕೊಟ್ಟು, ಆ ತಟ್ಟೆಯನ್ನು ಇಸಕೊಂಡಳು. 'ಯಾರಿಗೂ ಹೇಳಬೇಡವೆಂದು' ಸರ್ವಜಯಾ ಆಣೆಯಿಟ್ಟು ಅವಳಿಗೆ ಪುನಃಪುನಃ ಹೇಳಿದಳು.

ಒಂದೆರಡು ದಿನಗಳಿಂದ ಎಡೆಬಿಡದೆ ಸುರಿಯುತ್ತಲಿತ್ತು ಮಳೆ. ಹಳ್ಳ ಕೊಳ್ಳಗಳ ಪಾಳಿ ಮುಗಿದು, ಊರಿನ ಹಾದಿಯಲ್ಲೂ ಮಂಡಿಯುವರೆಗೂ ತುಂಬಿ ಹೋಗಿದ್ದಿತು. 'ಹೂ, ಹೂ' ಎಂದು ಬೀಸುವ ಗಾಳಿಗೆ ಬಿದಿರು ಮೆಳೆಗಳು ಬಾಗಿ ನೆಲಕ್ಕೆ ಝಟ್‌ಪಟ್ಟೆಂದು ಬಡಿಯುತಿದ್ದವು. ಅಪೂ ಬಾಗಿಲಲ್ಲಿ ನಿಂತಿದ್ದರೂ ತೊಯಿಸಿಕೊಂಡವನಾಗಿ "ಲೇ ಅಕ್ಕಾ, ನಮ್ಮ ಮನೆ ಮುಂದಿನ ಬಿದಿರು ಮೆಳೆಯರ್ಧವೆಲ್ಲ ನೀರಲ್ಲಿ ಮುಳುಗಿ ಹೋಗಿದೆಯೇ ನೋಡು ಬಾ" ಎಂದು ಕೂಗಿದ.

ದುರ್ಗಾಳಿಗೆ ಒಂದೆರಡು ದಿನದಿಂದ ಶೀತಜ್ವರ ಹಿಡಿದೂ ಬಿಟ್ಟೂ ಬರುತ್ತಲಿದೆ. ಕಂಬಳಿ ಹೊದೆದುಕೊಂಡು ಮಲಗಿದವಳು, "ಎಷ್ಟು ಬಂದಿದಿಯೋ ? ಎಲ್ಲಿಯ ವರೆಗೊ ?" ಎಂದು ಕೂಗಿದಳು. ಅಪೂ "ಹುಣಸೇ ಮರದ ದಾರಿಯಲ್ಲಿ ಮುಂಡಿಯವರೆಗೆ ಇದೆ. ಅಮ್ಮಾ ಎಲ್ಲೇ" ಎಂದು ಹಸಿವೆಯ ನೆನಪಾಗಿ ಒಳಗೆ ಬಂದನು.

ಮನೆಯಲ್ಲಿ ಒಂದು ಕಾಳು ಅಕ್ಕಿಯಿಲ್ಲ. ಒಂದೆರಡು ಪಾವು ಮುಗ್ಗಿದ ವಾಸನೆಯ ಅವಲಕ್ಕಿ ಇದೆ. ಅಪೂ ರಗಳೆ ಮಾಡುತ್ತ "ಅದೆಲ್ಲ ಆಗೋದಿಲ್ಲ. ನನಗೆ ಹಸಿವಾಗೋದಿಲ್ಲೇನೋ ಮತ್ತೆ ? ನನಗೆ ಅನ್ನ ಹಾಕು." ಎಂದರೆ ಅವರಮ್ಮ "ನನ್ನ ಚಿನ್ನ, ಹಾಗೆಲ್ಲ ಹಟ ಮಾಡಬಾರದಪ್ಪ. ಎಲ್ಲಿಂದ ತರಲೋ ನಾನು ಈ ಮಳೆಯಲ್ಲಿ ? ಅವಲಕ್ಕಿಯನ್ನೇ ಕಲಿಸಿಕೊಡುತ್ತೇನೆ. ನೀನೇ ನೋಡ್ತಾ ಇದ್ದೀಯಾ. ಮಳೆ ಹೇಗೆ ಹೊಡೀತಾ ಇದೆ. ಒಲೆಯೊಳಗೆಲ್ಲಾ ನೀರು ತುಂಬಿಕೊಂಡು ಹೋಗಿದೆ." ಎಂದು ಸಮಾಧಾನ ಮಾಡುವಳು.

ಆದೇ ಸಮಾಧಾನ ಅವಳ ಮನಸ್ಸನ್ನು ಈಟಿಯಂತೆ ಇರಿಯುತ್ತದೆ. 'ಐದಲ್ಲ, ನಾಲ್ಕಲ್ಲ ಇರುವವ ಒಬ್ಬ ಮಗ. ತುಪ್ಪ ಕೇಳಲಿಲ್ಲ; ಪೂರಿ, ಸಂದೇಶ ಕೇಳಲಿಲ್ಲ. ಬರೇ ಅನ್ನ ಕೇಳಿದರೂ ಕೊಡುವುದಕ್ಕಾಗಲಿಲ್ಲ ನನಗೆ, ಪಾಪಿ ನಾನು ! ಈ ಮುರುಕಲು ಮನೆ, ಈ ಅಭಾವದ ಸಂಸಾರ. ಅಪೂ ದೊಡ್ಡವನಾದರೆ ಈ ಕಷ್ಟ ಇರುವದಿಲ್ಲ. ದೇವರೇ, ಅವನನ್ನು ಆದಷ್ಟು ಬೇಗ ದೊಡ್ಡವನಾಗಿ ಮಾಡಿಬಿಡು ದೇವರೇ' ಎಂದುಕೊಳ್ಳುವಳು.

ಜ್ವರದಿಂದ ಹಾಸಿಗೆ ಹಿಡಿದಿದ್ದ ದುರ್ಗಾ ಈಗ ಹೊಟ್ಟೆಗೆ ಏನೂ ತೆಗೆದುಕೊಳ್ಳಲಾಗುತ್ತಿರಲಿಲ್ಲ. ಆದರೆ 'ಒಂದು ಮೂರು ಕಾಸಿಗೆ ಬಿಸ್ಕೂಟ್ ತರಿಸಿಕೊಡಮ್ಮ. ಬಾಯಿಗೆ ರುಚಿಯಾಗಿರುತ್ತೆ' ಅಂತಾಳೆ ದುರ್ಗ. ಎಲ್ಲಿಂದ ತರುವುದು ? ಜ್ವರ ಕಡಿಮೆಯಾಗುವುದಕ್ಕೆ ಔಷಧವಿಲ್ಲ, ಪಥ್ಯವಿಲ್ಲ, ವೈದ್ಯರ ಸುಳಿವಿಲ್ಲ.

ಸ್ವತಃ ಅವಳಿಗೇನೆ ಕೊಡಲು ತ್ರಾಣವಿಲ್ಲ. ಕೆಲವು ದಿನಗಳಿಂದ ಆ ಸೊಪ್ಪು, ಈ ಸೊಪ್ಪು ಬೇಯಿಸಿ ತಿಂದಿದ್ದಾಳೆ. ಅವಳ ಮೈ ಚಿಂತೆಯಿಂದ

ಅನ್ನಾಹಾರ ಅಭಾವದಿಂದ ದುರ್ಬಲವಾಗಿದೆ. ತಲೆಯಲ್ಲಿ ಏನೊ ಗುಂಯ್ ಎನ್ನುತ್ತದೆ.

ಅವಳು ಮಂಗಳ ಹಾಸುಗೆಯ ಬಳಿ ಕುಳಿತುಕೊಂಡು, ಇಬ್ಬರಿಗೂ ತನ್ನ ಹಿಂದಿನ ಅನುಭವಗಳನ್ನು ಹೇಳುವಳು. ತಾನು ಮದುವೆಯಾದ ಹೊಸದರಲ್ಲಿ ನಿಶ್ಚಿಂದಿಪುರಕ್ಕೆ ಸಂಸಾರ ಹೂಡಲು ಬಂದದ್ದು, ಆಗಲೂ ಹೀಗೆಯೇ ಇಡೀ ವರ್ಷ ಪಟ್ಟಾಗಿ ಮಳೆ ಹೊಡೆದಿದ್ದು... ಹೇಳುತ್ತ, ಹೇಳುತ್ತ ಅವಳಿಗೆ ತೂಕಡಿಕೆ ಬರುವುದು.

ರಾತ್ರಿ ಯಾವಾಗಲೊ ಅಪೂ ಕೂಗುತ್ತಿದ್ದ "ಅಮ್ಮಾ ಲೇ ಅಮ್ಮಾ, ಏಳೇ. ನನ್ನ ಮೈಮೇಲೆ ಮಳೆ ಬೀಳುತಾ ಇದೆ."

ಸರ್ವಜಯಾ ದೀಪ ಹತ್ತಿಸಿದಳು. ದುರ್ಗಾ ಜ್ವರದ ತಾಪದಲ್ಲಿ ಹಾಗೇ ನಿದ್ದೆ ಹೋಗಿಬಿಟ್ಟಿದ್ದಳು. ಆದರೆ ಅವಳ ಹೊದಿಕೆ ಮಳೆ ನೀರಿನಿಂದ ನೆನೆದು ಹೋಗಿದೆ. 'ದುರ್ಗಾ, ಎಲ್ಲಾ ನೆನೆದು ಹೋಗಿದೆಯಲ್ಲೆ ? ಏನು ಗತಿಯಮ್ಮ ? ಏಳೇ' ಎನ್ನುತ್ತ, ಅವಳ ಹಾಸಿಗೆಯನ್ನು ಸರಿಸಿದಳು.

ಮಕ್ಕಳೇನೊ ಅರ್ಧ ತಾಸಿನ ಮೇಲೆ ಪುನಃ ನಿದ್ರಿಸಿದುವು. ಸರ್ವಜಯಾಳಿಗೆ ಮಾತ್ರ ನಿದ್ದೆ ಬಾರದು. ಗಾಡಾಂಧಕಾರದ ರಾತ್ರಿ, ಹೊಯ್ಯುತ್ತಿರುವ ಮಳೆ, ಅವಳ ಎದೆಯಲ್ಲೇನೊ ಗಾಬರಿ. ಏನೊ ಆಗುತ್ತದೆಂಬ ಅವ್ಯಕ್ತ ಭೀತಿ. ಗಂಡನ ನೆನಪಾಯಿತು. "ಅಯ್ಯೋ ! ದೇವರೇ; ಇವರು ಎಲ್ಲಿದಾರೆಯೊ ? ದುಡ್ಡು ಹಾಳಾಗಲಿ. ಎರಡು ಪಂಕ್ತಿ ಕಾಗದವಾದರೂ ಬಂದರೆ ಅಮ್ಮಾ, ವಿಶ್ವೇಶ್ವರೀ. ನಾಳೆ ಜಾತ್ರೆಯಲ್ಲಿ ಕುಂಕುಮ ಪೂಜೆ ಮಾಡಿಸತೀನಿ. ಅವರು ಚೆನ್ನಾಗಿದ್ದ ಸುದ್ದಿ ಬರುವಂತೆ- ಮಾಡು."

ಆಗ ಎಲ್ಲಿದ್ದ ಹರಿಹರರಾಯ ? ದೂರದ ಕೃಷ್ಣನಗರದ ಧರ್ಮಛತ್ರದಲ್ಲಿ ಮಲಗಿ ಯೋಚಿಸುತ್ತಿದ್ದ. ಆ ಊರಿಗೆ ಬಂದು, ಜಮೀನದಾರರು, ವಕೀಲರ ಮನೆಗಳಿಗೆಲ್ಲ ಎಡತಾಕಿದಾಗ, ದುರ್ಗಾ ಪೂಜೆ ಮಾಡಿಸುವ ಕೆಲಸಗಳೆಲ್ಲಾ ಅವರಲ್ಲಿ ಭರ್ತಿಯಾಗಿವೆಯೆಂದು ತಿಳಿಯಿತು. ಆ ಅಲೆದಾಟದಲ್ಲಿ ಹದಿನೈದು ದಿನಗಳನ್ನು ಕಳೆದುದಾಯಿತು. ಕೈಲಿದ್ದ ಹಣವೆಲ್ಲ ಖರ್ಚಾಗಿ ಹೋಯಿತು.

ಬೆಳಿಗ್ಗೆಯಿಂದ ಏನೂ ತಿನ್ನದೇ ಇದ್ದ. ಸಂಜೆ ಒಂದು ಸೌದೆಯಂಗಡಿಯಲ್ಲಿ ಶಾಮಸುಂದರನ ಹಾಡು ಹೇಳಿದಾಗ, ಅಂಗಡಿಯ ಯಜಮಾನ ಒಂದು ರೂಪಾಯಿ ಕೊಡುತ್ತಲೂ ಅದರಲ್ಲಿ ಎರಡಾಣೆಯ ಪೂರಿ, ಮೊಸರನ್ನು ಕೊಂಡುಕೊಂಡು ಊರ ಮಧ್ಯದಲ್ಲಿ ಹರಿಯುತ್ತಿದ್ದ ನದಿಯ ದಂಡೆಗೆ ಬಂದನು. ಕೈಕಾಲು ತೊಳೆದುಕೊಂಡು, ತಿನ್ನುವಾಗ ತುತ್ತು ಗಂಟಲಿಂದ ಒಳಗೆ ಹೋಗುವುದೇ ಕಷ್ಟವಾಯಿತು. ಊರು ಬಿಟ್ಟು ಎರಡು ತಿಂಗಳಾಗುತ್ತ ಬಂತು, ಮೂರು ಕಾಸೂ ಕಳಿಸಲಿಕ್ಕಾಗಲಿಲ್ಲ. ಹೇಗೆ ಬದುಕನ್ನು ಸಾಗಿಸುತ್ತಿದ್ದಾರೆಯೊ ? ಪುಟ್ಟ ಮಕ್ಕಳು ಬೇರೆ.

ಮನೆ ಬಿಡುವಾಗ ಅಪ್ಪೂ ತನಗಾಗಿ ಒಂದು 'ಪದ್ಮ ಪುರಾಣ'ದ ಕಥೆ ಪುಸ್ತಕವನ್ನು ತರಹೇಳಿದ್ದ. ದುರ್ಗಾ ಒಂದು ಹಸಿರು ಬಣ್ಣದ ಬಟ್ಟೆ ಮತ್ತು ಒಂದು ಪುಟ್ಟ ಕನ್ನಡಿ ತರಹೇಳಿದ್ದಳು. ಆದರೆ ಅವೆಲ್ಲ ದೂರದ ವಿಷಯ ಯಾವ ರೀತಿ ಮನೆಯಲ್ಲಿ ಸಂಸಾರ ಜರಗುತ್ತಾಯಿದೆ. ದೇವರೇ ! ಇದೇ ಅವನ ಯೋಚನೆ.

ಮರುದಿನವೇ ಹರಿಹರನಿಗೆ ಒಳ್ಳೆಯ ಯೋಗ ಬಂದಂತಾಯಿತು. ಹತ್ತಿರದ ಹಳ್ಳಿಯ ಒಬ್ಬ ದೊಡ್ಡ ವರ್ತಕನು, ನವರಾತ್ರಿಯ ದೇವರ ಪೂಜೆಗೆಂದು ಯೋಗ್ಯ ಅರ್ಚಕನನ್ನು ಹುಡುಕುತ್ತಿದ್ದಾನೆಂದು ತಿಳಿಯಿತು. ಹರಿಹರರಾಯ ಅಲ್ಲಿಗೆ ಹೋದನು. ಕೆಲ ಕಾಲ ಅವನಲ್ಲಿದ್ದು, ೧೦–೧೫ ರೂ. ಹಣ ಜಮಾಯಿಸಿಕೊಂಡು, ಸೌದೆಯವನನ್ನು ಬೀಳ್ಕೊಂಡು ಊರಿಗೆ ಹೊರಟುನಿಂತನು. ಅಂದು ಆ ಊರಿನ ಸಂತೆ. ಹರಿಹರನು ಹೆಂಡತಿ–ಮಕ್ಕಳಿಗೆಂದು ಬಟ್ಟೆಗಳನ್ನು ಕೊಂಡನು. ದುರ್ಗಾ ಹೇಳಿದ ಹಸಿರು ಬಟ್ಟೆ, ಕನ್ನಡಿಗಳಲ್ಲದೆ, ಕಾಲಿಗೆ ರಂಗು ಹಚ್ಚುವದಕ್ಕೆ ಅರಗಿನ ಕೆಲವು ತುಣುಕುಗಳನ್ನೂ ಕೊಂಡನು. ಅಪ್ಪೂ ಹೇಳಿದ ಪದ್ಮಪುರಾಣ ಎಲ್ಲೂ ಸಿಗಲಿಲ್ಲ. ಕಡೆಯಲ್ಲಿ 'ಸಚಿತ್ರ ಚಂಡೀ ಮಹಾತ್ಮೆ ಮತ್ತು ಕಾಲಕೇತುವಿನ ಉಪಾಖ್ಯಾನ' ಎಂಬ ಒಂದು ಪುಸ್ತಕವನ್ನು ಕೊಂಡನು. ಅವನು ಅಂದು ಖರೀದಿ ಮಾಡಿದ ವಸ್ತುಗಳಲ್ಲಿ ಸರ್ವಜಯಾ ಹಿಂದೊಮ್ಮೆ ಹೇಳಿದ್ದ, ಹಪ್ಪಳ ಒತ್ತುವ ಲಟ್ಟಣಿಗೆ ಕೂಡಾ ಇದ್ದಿತು.

ಅವನ ರೈಲಿನ ಪ್ರಯಾಣ ಕೊನೆಗೊಂಡು, ಮುಂದಿನ ಹಲವು ಮೈಲು ಗಳನ್ನು ನಡೆದುಕೊಂಡು ಬಂದು, ಹರಿಹರನು ಊರನ್ನು ಸಮೀಪಿಸುತ್ತಿದ್ದಾಗ ಸಂಜೆಯಾಗಿತ್ತು. ಬೇಗ ಬೇಗ ಕಾಲು ಹಾಕುತ್ತ ಬಂದ. ಮನೆಯ ಮೇಲೆ ಆದ ಮಳೆಯ ಅನಾಹುತ ಕಂಡುಬಂದು ಇದಕ್ಕೇನಾದರೂ ವ್ಯವಸ್ಥೆ ಮಾಡ ಬೇಕು ಎಂದುಕೊಂಡ. ಮನೆಯ ಅಂಗಳದಲ್ಲಿ ಹೊಕ್ಕು ವಾಡಿಕೆಯಂತೆ ಉಚ್ಚ ಸ್ವರದಲ್ಲಿ "ದುರ್ಗಾ, ಲೇ ದುರ್ಗಾ, ಲೋ ಅಪೂ" ಎಂದು ಕೂಗಿ ಕೊಂಡೇ ಬಂದ.

ಅವನ ಸ್ವರ ಕೇಳಿ ಸರ್ವಜಯಾ ಒಳಗಿಂದ ಬಂದಳು. ಹರಿಹರ ನಗುಮುಖವಾಗಿ "ಇವರೆಲ್ಲ ಎಲ್ಲಿ ಹೋದರು? ಮನೆಯಲ್ಲಿ ಇಲ್ಲ ಅಂತ ಕಾಣುತ್ತೆ" ಎಂದ. ಸರ್ವಜಯಾ ಗಂಡನ ಕೈ-ಕಾಲಿಗೆ ನೀರು ತಂದಳು. ಹರಿಹರನು ಗಂಟು-ಮೂಟೆಗಳನ್ನು ಕೆಳಗಿಳಿಸಿ, ಕೈ-ಕಾಲು ತೊಳೆದುಕೊಂಡ. ಆದರೆ ಹೆಂಡತಿಯ ಮೌನ, ಗಂಭೀರ ಭಾವವನ್ನು ಕಂಡು ಚಕಿತನಾಗಿ ತಾನು ಇಷ್ಟು ಕಾಲ ಹೊರಟುಹೋದದ್ದಕ್ಕಾಗಿ ಅಸಮಾಧಾನವಿರಬೇಕು- ಎಂದು ಕೊಂಡ. ಇನ್ನೇನು ಒಂದೆರಡು ನಿಮಿಷಗಳಲ್ಲೇ ಓಡಿಬಂದು ಮೈಮೇಲೆ ಬಿದ್ದುಬಿಡುತ್ತಾರೆ ಮಕ್ಕಳಿಬ್ಬರೂ. ದುರ್ಗಾ ಬಂದು ನಗುತ್ತ ಗಂಟು ನೋಡಿ 'ಏನಪ್ಪಾ ಇದೆ ಆದರಲ್ಲಿ?' ಎಂದು ಕೇಳುತ್ತಾಳೆ. ಆದ್ದರಿಂದ ಎಲ್ಲಾ ಹೊರಗೆ ತೆಗೆದು ಇಡೋಣ ಎಂದುಕೊಂಡು ಗಂಟನ್ನು ಬಿಚ್ಚಿದ. 'ಒಳ್ಳೇ ಮಂಜಬೂತಾದ ಲಟ್ಟಣಿಗೆಯೇ ತಂದಿದ್ದೇನೆ' ಎಂದನು- ಹೆಂಡತಿಯ ಕಡೆ ನೋಡಿ, ನಗುತ್ತಾ ಆಮೇಲೆ ನಿರಾಶಾಮಿಶ್ರಿತ, ಕಾತರತೆಯ ದೃಷ್ಟಿಯಿಂದ "ಅಲ್ಲೇ. ಈ ಹುಡುಗರು ಎಲ್ಲಾದರೂ ಅಲೆಯುವುದಕ್ಕೆ ಹೋಗಿದ್ದಾರೆಯೆ? ಎಲ್ಲಿ ಅಪೂ? ಎಲ್ಲಿದ್ದಾಳೆ ದುರ್ಗಾ" ಎಂದೊಡನೆ ಸರ್ವಜಯಾ ಇನ್ನು ತಡೆಯಲಾರದೇ ದೊಡ್ಡದಾಗಿ ಚೀತ್ಕಾರ ಮಾಡುತ್ತಾ, ಬಿಕ್ಕಿ ಬಿಕ್ಕಿ ಅಳಲು ಶುರುಮಾಡಿದಳು.

"ಅಯ್ಯೋ, ಇನ್ನೆಲ್ಲಿಯ ದುರ್ಗಾ. ಅಂದರೆ? ನಮ್ಮನ್ನು, ನಮ್ಮನ್ನೆಲ್ಲ ಕೈಬಿಟ್ಟು ಹೋಗಿಬಿಟ್ಟಳೆಂದರೆ, ಅಯ್ಯೋ. ಇಷ್ಟು ದಿನ ಎಲ್ಲಿದ್ದಿರೀಂದರೆ?"

[೪]

ನೋಡನೋಡುತ್ತ ದಿನಗಳು ಉರುಳಿ, ಚಳಿಗಾಲವೂ ಮುಗಿಯುತ್ತ ಬಂದಿದೆ. ದುರ್ಗಾಳ ಸಾವಾದ ಮೇಲೆ ಸರ್ವಜಯಾ ಅನಂತರವೂ ಗಂಡನಿಗೆ ಆ ಗ್ರಾಮ ಬಿಟ್ಟು ಬೇರೆಲ್ಲಾದರೂ ಹೋಗಬೇಕೆಂದು ತಗಾದೆ ಮಾಡಲಾರಂಭಿಸಿದಳು. ಹರಿಹರನೂ ನಾನಾ ಸ್ಥಳಗಳಲ್ಲಿ ಪ್ರಯತ್ನ ಮಾಡಿ ನೋಡಿದ, ಆದರೆ ಯಾವ ಸ್ಥಳಗಳಲ್ಲೂ ಅನುಕೂಲ ಒದಗಿಬರಲಿಲ್ಲ. ಈಚೆಗೆ ಆ ಆಶೆಯನ್ನು ಬಿಟ್ಟುಬಿಟ್ಟಿದ್ದಾಳೆ– ಸರ್ವಜಯಾ.

ಅವಳ ಜೀವನದ ಒಂದೇ ಆಸೆಯೆಂದರೆ– ಅಪೂ ದೊಡ್ಡವನಾಗಬೇಕೆಂಬುದು. ಹಳ್ಳಿಗಾಡಿನ ಹೆಂಗಸಾದ ಆಕೆಗೆ ತನ್ನ ಮಗ ಸ್ಕೂಲು, ಕಾಲೇಜುಗಳಿಗೆ ಹೋಗಿ ಅಭಿವೃದ್ಧಿಯಾಗಬೇಕೆಂಬ ಆಸೆಯೇನಿಲ್ಲ. ಅವಳ ಯಜಮಾನರಿಗೆ ಯಾವ ಯಾವ ಶಿಷ್ಯರ ಮನೆಗಳಿದ್ದವೋ, ಮಗ ಕೆಲವು ವರ್ಷಗಳಾದ ಮೇಲೆ ಅದೇ ಮನೆಗಳಲ್ಲದರಲ್ಲೂ ಶಾಸ್ತ್ರವಚನ ಮಾಡುತ್ತಾನೆ. ಅವುಗಳನ್ನೇ ಸ್ಥಿರವಾಗಿಟ್ಟುಕೊಂಡಿರುತ್ತಾನೆ– ಇವೇ ಅವಳ ದೊಡ್ಡ ಆಸೆಗಳು. ಊರಲ್ಲಿಯ ಹೆಂಗಳೆಯಾದರೂ ಈ ಸರಳ, ನಿಷ್ಪಾಪದ, ಸುಂದರ ಮುಖದ ಅಪೂನಿಂದಲೇ ಪ್ರತಿವರ್ಷ ಬರುವ ಮಾನಸಪೂಜೆ, ಲಕ್ಷ್ಮಿಪೂಜೆ ಇತ್ಯಾದಿ ವ್ರತಗಳನ್ನು ಮಾಡಿಸಿಕೊಳ್ಳುವ ತಮ್ಮ ಆತುರವನ್ನು ವ್ಯಕ್ತಪಡಿಸಿದ್ದರು ಕೂಡಾ. ಆಗ ಸರ್ವಜಯಾ, "ನೀವೆಲ್ಲ ಹಿರಿಯರು ಆಶೀರ್ವಾದ ಮಾಡಿದರೆ ನಾಳೆ ಫಾಲ್ಗುಣದಲ್ಲಿ ನಮ್ಮ ಅಪೂ ಮುಂಜಿ ಮಾಡಬೇಕೆನ್ನುತ್ತೇನೆ" ಎಂದು ಹೇಳುವಳು.

ಹರಿಹರನಿಗೂ ತನ್ನ ಮಗ ಚೆನ್ನಾಗಿ ಓದಿ ಪಂಡಿತನಾಗಬೇಕು, ದೊಡ್ಡ ಮನುಷ್ಯನಾಗಬೇಕು ಎಂಬ ಆಸೆಯೇನೊ ಇದೆ. ಆದರೆ ದೂರದ ಬೋರ್ಡಿಂಗ್, ಸ್ಕೂಲಿನಲ್ಲಿಟ್ಟು ಓದಿಸಲು ಅವನಿಗೆಲ್ಲಿ ಸಾಧ್ಯ ? ಆದ್ದರಿಂದ ತಾನೇ ಯಾವುದರಿಂದ ಮಗನಿಗೆ ಜ್ಞಾನವೃದ್ಧಿಯಾಗುವುದೆಂದು ಅನ್ನಿಸುತ್ತದೊ ಅದನ್ನೇ ಮಗನಿಗೆ ಹೇಳುತ್ತಾನೆ. ಅವನು ಬಹುದಿನದಿಂದ 'ವಂಗವಾಸಿ' ಪತ್ರಿಕೆಯ ಚಂದಾದಾರನಾಗಿದ್ದ. ಈಗ ಚಂದಾಹಣ ಕೊಡಲು ಆಗದೆ ಪತ್ರಿಕೆ ಬರುವುದು ನಿಂತುಹೋಗಿದ್ದಿತು. ಅಪೂವಿಗೂ 'ವಂಗವಾಸಿ'

ಯೆಂದರೆ ಬಲು ಅಚ್ಚುಮೆಚ್ಚು. ಪ್ರತಿ ಶನಿವಾರ ಭುವನ ಮುಖರ್ಜಿಗಳ ಚಂಡೀ ಮಂಟಪಕ್ಕೆ ಹೋಗಿ, ಅಲ್ಲಿ ಅಂಚೆಯ ಜವಾನನಿಗಾಗಿ ವ್ಯರ್ಥ ನೀರಿಕ್ಷೆ ಮಾಡುತ್ತ ಕೂಡುತ್ತಿದ್ದ. ಪತ್ರಿಕೆ ಏಕೆ ಬರುವುದು ನಿಂತು ಹೋಯಿತೆಂದು ಮಗನಿಗೆ ತಿಳಿಸಲು ಹರಿಹರನಿಗೆ ಎಷ್ಟು ಸಂಕಟವಾಯಿತೊ !

ಅಪೂ ಹಳೆಯ 'ಮಂಗವಾಸಿ'ಯನ್ನೇ ಓದಿ ಅನೇಕ ವಿಷಯಗಳನ್ನು ತಿಳಿದುಕೊಂಡಿದ್ದಾನೆ. ಶುಭಂಕರಿಯ ಸಹಾಯದಿಂದ (ಅದೊಂದು ಮಗ್ಗಿ ಪುಸ್ತಕ) ಲೆಕ್ಕ ಸುಮಾರಾಗೆ ಬರುತ್ತದೆ. ಆಲ್ಜೀಬ್ರಾ, ಜ್ಯಾಮಿಟ್ರಿಯೆಂಬ ಪದಗಳನ್ನು ಕೇಳಿ ಕೂಡಾ ಅರಿಯ. ಸರಸರನೆ ಓದುತ್ತಿದ್ದರೂ ವ್ಯಾಕರಣದ ಗಂಧವಿಲ್ಲ. ಆದರೂ ಮಂಗವಾಸಿಯಲ್ಲಿ ಬಂದಿದ್ದ ದೇಶ, ವಿದೇಶಗಳ, ಯಾತ್ರೆ, ಚರಿತ್ರೆಗಳು ಅವನಿಗೆ ಅಚ್ಚುಮೆಚ್ಚು.

ಓದುತ್ತ ಓದುತ್ತ ಅಪೂ ತನ್ನ ಕಲ್ಪನೆಯ ಕುದುರೆಯನ್ನು ಹಾರಬಿಡು ವನು. ಕಲಕತ್ತೆಯಿಂದ ಅವನ ಜಹಜು ಹೊರಟಿದೆ. ಬಂಗಾಳಾ ಕೊಲ್ಲಿ ಯನ್ನು ಪ್ರವೇಶಿಸಿ, ಮಧ್ಯೆ ಸಾಗರ ದ್ವೀಪವನ್ನೂ ಪಾರಾಗಿ, ದಾರಿಯಲ್ಲಿನ ಎಷ್ಟೋ ಚಿಕ್ಕಪುಟ್ಟ ದ್ವೀಪಗಳನ್ನೆಲ್ಲಾ ದಾಟಿ ಸಿಂಹಳ ದ್ವೀಪದ ತೀರ ಪ್ರದೇಶದಲ್ಲಿ ಹೊಳೆಯುತ್ತಿರುವ ಹಸಿರು ಶೋಭೆಯ ತೆಂಗಿನ ತೋಪುಗಳ ನ್ನೆಲ್ಲಾ ಆತ ನೋಡಿಬಿಟ್ಟಿದ್ದಾನೆ ! ಅವನ ಹಡಗು ಮತ್ತೆ ಮುಂದಿನ ದೇಶಕ್ಕೆ ಹೊರಡಲು ಸನ್ನದ್ಧವಾಗಿದೆ. ಮಂಗವಾಸಿಯ ಸಂಚಿಕೆಗಳು ಇಂಥ ಹಲವಾರು ದೇಶಗಳ ವಿವರಗಳನ್ನು ತಿಳಿಸಿವೆ. ಆ ದೇಶಗಳಲ್ಲೆಲ್ಲ ಎಲ್ಲೋ ಒಂದು ಕಡೆ, ಯಾರೋ ಒಬ್ಬರು ಅವನಿಗಾಗಿ ಕಾದಿದ್ದಾರೆ, ಕರೆಯುತ್ತಿದ್ದಾರೆ. ಆತ ಹೋಗುತ್ತಿದ್ದಾನೆ...

ದೇಶಾಂತರಕ್ಕಲ್ಲದಿದ್ದರೂ ಸ್ವದೇಶದಲ್ಲಿಯೇ ಕಾಶಿಗೆ ಹೋಗಬೇಕೆಂದು ಸ್ವಗ್ರಾಮವನ್ನು ಬಿಡಬೇಕೆಂದು ತನ್ನ ತಂದೆ–ತಾಯಿಯರು ಯೋಚಿಸುತ್ತಿರು ವುದನ್ನು ಅಪೂ ಒಂದು ರಾತ್ರಿ ಕಣ್ಣುಮುಚ್ಚಿ ಮಲಗಿಕೊಂಡೇ ಕೇಳಿದ. ಅಪ್ಪ ಚಿಕ್ಕ ವಯಸ್ಸಿನವರಿದ್ದಾಗ ಕಾಶಿಯಲ್ಲಿ ಎಷ್ಟೋ ದಿನ ವಾಸವಾಗಿದ್ದರಂತೆ. ಗುರುತಿನ ಜನ ಹೊರಡಬಹುದು. ಸಾಮಾನುಗಳೂ ಅಗ್ಗ ಎಂದಾಗ ಅಮ್ಮ 'ನಡೆಯಿರಿ, ಈಗಲೆಂದರೆ ಈಗಲೇ ಹೋಗೋಣ' ಎಂದು ಉತ್ಸಾಹ ತೋರಿಸಿ

ದಳು. ಆದರೂ ವೈಶಾಖ ಮಾಸದಲ್ಲಿ ಕಾಶಿಗೆ ಹೊರಡುವುದೆಂದು ತೀರ್ಮಾನ ವಾಗಿ ಬಿಟ್ಟಿತು.

ಯಾವ ಸಾಮಾನುಗಳನ್ನು ಸಂಗಡ ತೆಗೆದುಕೊಂಡು ಹೋಗಲು ಆಗುವು ದಿಲ್ಲವೊ ಅವುಗಳನ್ನೆಲ್ಲ ಮಾರಿಬಿಟ್ಟು, ಅಷ್ಟು ಇಷ್ಟು ಸಾಲಗಳನ್ನು ತೀರಿಸಿ ಬಿಟ್ಟರು. ಹಳೆಯ ಕಾಲದ ಹಲಸಿನ ಮರದ ದೊಡ್ಡ ಮಂಚ, ಪೆಟ್ಟಿಗೆಗಳು, ಕಾಲುಮಣೆಗಳು— ಎಲ್ಲವೂ ಕೈಬಿಟ್ಟು ಹೋದುವು.

ಗ್ರಾಮದ ದೊಡ್ಡ ಮನುಷ್ಯರು ಕೆಲವರು ಬಂದು ಹರಿಹರನನ್ನು ಊರು ಬಿಡುವ ನಿರ್ಣಯವನ್ನು ವಾಪಸ್ಸು ತೆಗೆದುಕೊಳ್ಳುವಂತೆ ಪ್ರಯತ್ನಿಸಿ ನೋಡಿದರು. ಆದರೆ ಅವನ ನಿರ್ಧಾರ ಗಟ್ಟಿಯಾಗಿದ್ದಿತು.

ಹೊರಡುವ ದಿನ ಮಧ್ಯಾಹ್ನ ಸ್ವಲ್ಪ ಹೊತ್ತು ಕಳೆದ ಮೇಲೆ, ಹೀರೂ ಎಂಬ ಬಂಡಿಯವನ ಎತ್ತಿನ ಗಾಡಿಯಲ್ಲಿ ಸಾಮಾನುಗಳನ್ನೆಲ್ಲಾ ಹೇರಿ ತಂದೆ, ತಾಯಿ ಮಗ ಎಲ್ಲಾ ಕೂತರು.

ಹರಿಹರನು ಮಾತಾಡದೆ ಕೂತಿದ್ದ. ತಲೆತುಂಬ ಯೋಚನೆಗಳು, ತಾನು ಈಗ ಮಾಡುತ್ತಿರುವುದು ಒಳ್ಳೆಯದೆ ? ಎಷ್ಟೋ ವರ್ಷಗಳಿಂದ ಪಿತೃಗಳ ವಾಸಸ್ಥಾನವಾಗಿದ್ದ ಮನೆ ? ಇಷ್ಟು ದಿನ ಅಲ್ಲಿ ಉರಿಯುತ್ತಿದ್ದ ಮಣ್ಣಿನ ಹಣತೆಯ ಪ್ರದೀಪವಾದರೂ ಇವತ್ತಿನಿಂದ ಆರಿಹೋದಂತಾಯಿತು. ತಂದೆ ರಾಮಚಂದ್ರ ತರ್ಕವಾಗೀಶನು ಸ್ವರ್ಗದಿಂದ ಇದನ್ನು ನೋಡುತ್ತಾ ಮನಸ್ಸಿನಲ್ಲಿ ಏನಂದುಕೊಳ್ಳುವನೋ !

ರಾತ್ರಿ ಸುಮಾರು ಹತ್ತು ಗಂಟೆಗೆ ಅವರ ಬಂಡಿಯು ಮಾಝೆಪಾಡಾ ಸ್ಟೇಶನ್ನಿಗೆ ಬಂದು ತಲುಪಿತು. ಅಂದು ಬಹಳ ಹೊತ್ತಿನಿಂದ ಬಂಡಿಯು ಯಾವಾಗ ಸ್ಟೇಷನ್ನನ್ನು ತಲುಪುವದೋ ಎಂಬ ನಿರೀಕ್ಷೆಯಿಂದಲೇ ಕುಳಿತಿದ್ದ ಅಪೂ ಬಂಡಿ ನಿಂತ ತಕ್ಷಣ ಕೆಳಗೆ ಧುಮುಕಿ ಒಂದೇ ಓಟದಲ್ಲಿ ಪ್ಲಾಟ್‌ಫಾರ್ಮಿಗೆ ಬಂದುಬಿಟ್ಟ. ಬೆಳುದಿಂಗಳು ಬಿದ್ದ ರೈಲಿನ ಕಂಬಿಗಳು ಚಕಮಕ ಹೊಳೆಯು ತ್ತಿವೆ. ಅಲ್ಲಲ್ಲಿ ಕೆಂಪು ದೀಪಗಳು ಅಪೂ ಸ್ಟೇಷನ್ ಮಾಸ್ತರನ ಕೊಠಡಿಯ ಬಳಿ ಬಂದು ಹಣಿಕಿ ಹಾಕಿದ. ಚಿಕ್ಕದೊಂದು ಲೋಹದ ಗುಂಡಿಯನ್ನು ಒತ್ತುತ್ತ ಒತ್ತುತ್ತ ಯಾವನೊ ಒಬ್ಬ ಖಟ್ ಖಟ್ ಎಂದು ಶಬ್ದ ಮಾಡು

ತ್ತಿದ್ದಾನೆ. ಅಪ್ಪ ಹೇಳಿದ್ದ ಟೆಲಿಗ್ರಾಫ್, ತಂತಿ ಸಮಾಚಾರದ ಸಾಧನ ಅದೇ ಎಂದು ಅವನಿಗೆ ತಿಳಿದು ಹೋಯಿತು.

ಇನ್ನು ಹೆಚ್ಚು ತಡವಿಲ್ಲ. ನಾಳೆ ಬೆಳಿಗ್ಗೆ ತಾನು ರೈಲು ಗಾಡಿಯನ್ನು ನೋಡುವದೊಂದೇ ಅಲ್ಲ, ಹತ್ತಿ ಕೂಡುವನು! ಎಂತಹ ಅನುಭವ! ಆ ಉತ್ಸಾಹದಲ್ಲಿ ಅವನು ಮಲಗಿದ್ದುದು ಸ್ವಲ್ಪೇ ಸಮಯ.

ಮರುದಿನ ಬೆಳಿಗ್ಗೆ ಇವರೆಲ್ಲರನ್ನು ಕೂಡಿಸಿಕೊಂಡು ಗಾಡಿ ಹೊರಟೇ ಬಿಟ್ಟಿತು. ಆ ಪ್ಲಾಟ್‌ಫಾರ್ಮ್, ನಿಂತಿದ್ದ ಜನ, ಬಂಡಿಯ ಹೀರೂ ಇವರೆಲ್ಲ ಕ್ಷಣಾರ್ಧದಲ್ಲಿ ಹಿಂದುಳಿದರು. ಮರ, ಗಿಡಗಳು ಸಟ್ ಸಟ್ ಎಂದು ಎರಡೂ ಕಡೆಯ ಕಿಟಿಕಿಗಳ ಪಾರ್ಶ್ವವನ್ನು ತಟಾಯಿಸಿಕೊಂಡು ಓಡುತ್ತಿವೆ. ಏನು ವೇಗ! ಓಹೋ! ಆ ಹುಲ್ಲುಗಾವಲು ಗಿರ್ರೆಂದು ತಿರುಗುತ್ತಿದೆ. ಎಲ್ಲವೂ ಏಕಾಕಾರವಾಗಿ ಓಡುತ್ತಿವೆ. ಗಾಡಿಯ ತಳಗಡೆ ಬೀಸುವ ಕಲ್ಲಿನಿಂದ ಬೀಸಿ ದಂತೆ ಏನೋ ಶಬ್ದ. ಮುಂದುಗಡೆ ಇರುವ ಇಂಜನ್ನಿನ ಶಬ್ದ ಬೇರೆ!

ಹಿಂದೊಮ್ಮೆ, ಬಹಳ ದಿನಗಳ ಹಿಂದೆ ತಾನೂ ಅಕ್ಕನೂ ಬರಿಯೆ ರೈಲು ರಸ್ತೆಯನ್ನು ನೋಡಬೇಕೆಂಬ ಆಸೆಯಿಂದ ಓಡಿ ಬಂದಿದ್ದುದು ಅಪೂರ್ವಿನ ನೆನಪಿಗೆ ಬಂತು. ಇದೇನು? ಅಲ್ಲಿ ದೂರದಲ್ಲಿ ನಿಶ್ಚಿಂದಿಪುರಕ್ಕೆ ಹೋಗುವ ರಸ್ತೆ ಡೊಂಕುಡೊಂಕಾಗಿ ಹೋಗುತ್ತದಲ್ಲ. ಅಲ್ಲಿ, ಆ ಮುದಿ ನೇರಿಳೆ ಗಿಡದಡಿಯಲ್ಲಿ ಅವನ ಅಕ್ಕ ಮ್ಲಾನಮುಖದಿಂದ ತಮ್ಮ ರೈಲುಗಾಡಿಯ ಕಡೆ ನೋಡುತ್ತ ನಿಂತಿದ್ದಾಳೆ.

ಅವಳನ್ನು ಯಾರೂ ಕರತರುವದಿಲ್ಲ. ಇಬ್ಬರೂ ಆಟವಾಡಿದ ದಾರಿ, ಹೊಳೆಯ ತೀರ, ಬಿದಿರು ವನ, ಮಾವಿನ ಮರಗಳ ಬುಡ–ನೆನಪಾದ ಎಲ್ಲ ಸ್ಥಳಗಳಲ್ಲಿಯೂ ಅಕ್ಕ ಕಾಣಿಸಿಕೊಂಡಳು. ಅವಳನ್ನು ಯಾರೂ ಪ್ರೀತಿ ಸುತ್ತಿಲ್ಲ. ಅವಳನ್ನು ಬಿಟ್ಟು ಬಂದದ್ದರಿಂದ ಯಾರಿಗೂ ದುಃಖವಾಗುತ್ತಿಲ್ಲ. ತಾನೂ ಅವಳನ್ನು ಬಿಟ್ಟು ಬಂದಿದ್ದಾನೆ. ಅವನ ಮನಸ್ಸಿನ ಮಧ್ಯದ ಮೂಕ ಭಾಷೆಯು ಕಣ್ಣೀರಿನಲ್ಲಿ ಹೊರಗೆ ತೋರಿಬರುತ್ತಾ, ತನಗೆ ತಾನೇ ಹೇಳಿ ಕೊಳ್ಳುತ್ತಿದ್ದಾನೆ, "ನಾನೇನು ನಿನ್ನನ್ನು ಮರೆತಿಲ್ಲವೇ. ಬೇಕೆಂದು ನಿನ್ನನು ಬಿಟ್ಟು ಹೋಗುತ್ತಿಲ್ಲವೇ ಅಕ್ಕಾ. ಇವರೇ ನನ್ನನ್ನು ದೂರ ಕರೆದುಕೊಂಡು ಹೋಗುತ್ತಿದ್ದಾರೆ."

[೫]

ಅದೊಂದು ಮೂರು ಅಂತಸ್ತಿನ ಮಹಡಿಯ ಮನೆ. ಕೆಳಗಿನ ಮಹಡಿಯಲ್ಲಿ ಹರಿಹರನು ಬಾಡಿಗೆಗೆ ಹಿಡಿದ ಎರಡು ಕೋಣೆಗಳ ಮನೆ ಅಷ್ಟೇನೂ ಚನ್ನಾಗಿರಲಿಲ್ಲ. ಹಠಾತ್ತಾಗಿ ಹೊರಗಡೆಯಿಂದ ಬಂದರೆ ಸ್ವಲ್ಪ ಹೊತ್ತು ಕಣ್ಣಿಗೆ ಏನೂ ಕಾಣಿಸದಷ್ಟು ಅಲ್ಲಿ ಕತ್ತಲೆಯಿದ್ದಿತು. ಇಂತಹ ಸ್ಥಳದಲ್ಲಿ ಸರ್ವಜಯಾ ಎಂದೂ ವಾಸ ಮಾಡಿರಲಿಲ್ಲ. ಅವರ ಸ್ವಗ್ರಾಮದ ಮನೆ ಹಳೆಯದಾದರೂ ಬಿಸಿಲು, ಗಾಳಿ ಬರಲು ದೊಡ್ಡ ಕಿಟಕಿಗಳಿದ್ದುವು. ಇಲ್ಲಿ ಇದ್ದುದು ಸಣ್ಣ ರಂಧ್ರದ ಕಿಟಕಿಗಳು. ಈ ಕತ್ತಲಲ್ಲಿ ಜೌಗು ನೆಲದಲ್ಲಿ ಅವಳಿಗೆ ತಲೆನೋವು ಬರುತ್ತಿತ್ತು.

ಮೊದಲ ಐದಾರು ದಿನಗಳನ್ನು ಗಂಡನ ಜೊತೆಯಲ್ಲಿ ಕಾಶಿಯ ಅನೇಕ ಸ್ಥಳಗಳನ್ನು ನೋಡುವುದರಲ್ಲಿಯೆ ಕಳೆದಳು. ಎಷ್ಟೊಂದು ದೇವಸ್ಥಾನಗಳು ಆ ಊರಲ್ಲಿ ತಮ್ಮ ಚಾಳಿನಲ್ಲಿ ವಾಸವಾಗಿರುವ ಒಬ್ಬ ಪಂಜಾಬೀ ಗೃಹಿಣಿಯೊಟ್ಟಿಗೆ ಒಂದು ರಾತ್ರಿ ವಿಶ್ವನಾಥ ಸ್ವಾಮಿಯ ಆರತಿ ನೋಡಲು ಹೋಗಿದ್ದಳು. ಧೂಪ, ದೀಪಗಳ ಹೊಗೆಯಿಂದ ಮಂದಿರವೆಲ್ಲ ತುಂಬಿ ಹೋಗಿದ್ದಿತು. ಏಳೆಂಟು ಜನ ಪೂಜಾರಿಗಳು ಒಂದೇ ಕಂಠದಲ್ಲಿ ಮಂತ್ರೋಚ್ಚಾರಣೆ ಮಾಡತೊಡಗಿದ್ದರು. ಏನು ಜನಸಂದಣಿ! ಏನು ಆ ವೈಭವ!

ಇತ್ತ ಹರಿಹರರಾಯನಿಗೆ ಅವನ ಪೂರ್ವದ ಗುರುತಿನವರಾರೂ ಹೊರಡಲಿಲ್ಲ– ಮಿಠಾಯಿ ಮಾರುವ ರಾಮಗೋಪಾಲನೊಬ್ಬನನ್ನು ಬಿಟ್ಟು. ಆದರೂ ಅಲ್ಲಲ್ಲಿ ಅಲೆದಾಡಿ, ಏಳೆಂಟು ದೇವಸ್ಥಾನದ ನಿತ್ಯ ಪುರಾಣ ಪ್ರವಚನದ ಏರ್ಪಾಟನ್ನು ಮಾಡಿಕೊಂಡನು. ಸರ್ವಜಯಾ ಒಂದು ದಿನ ಗಂಡನಿಗೆ ಉಪದೇಶಿಸಿದಳು, "ದಶಾಶ್ವಮೇಧ ಘಾಟನಲ್ಲಿ ನಿತ್ಯವೂ ನಿಮ್ಮ ತಾಳೆಗರಿಯ ಪುಸ್ತಕಗಳನ್ನೇಕೆ ಇಟ್ಟುಕೊಂಡು ಕೂಡಬಾರದು? ಎಷ್ಟೋ ಬೈರಾಗಿ ಜನ ಹಾಗೆ ಸಂಪಾದನೆ ಮಾಡುತ್ತಾರೆ.

ಹೆಂಡತಿಯ ಮಾತಿನಂತೆ ಹರಿಹರನು ಕಾಶೀ ಖಂಡದ ಗ್ರಂಥವನ್ನು ಎದುರಿಗಿಟ್ಟುಕೊಂಡು ಆ ಘಾಟಿನಲ್ಲಿ ಕೂಡ್ರುವನು. ಅದರಲ್ಲಿಯ ಶ್ಲೋಕಗಳನ್ನು ಪ್ರವಚನಮಾಡಿ ಹರಿಕಥೆಯ ರೂಪದಲ್ಲಿ ವಿವರಣೆ ಕೊಡುವನು.

ಈ ಉಪಕ್ರಮದಿಂದ ಅವನ ಆದಾಯವು ಹೆಚ್ಚತೊಡಗಿತು ಅವನ ಹರಿಕಥೆಯನ್ನು ಕೇಳುತ್ತ ಕೆಲವರು ಪ್ರಸಾದ, ಫಲಹಾರಗಳನ್ನು ತಂದು ಮುಂದಿಡುವರು.

ಗಾಳಿ, ಬೆಳಕುಗಳ ಕೊರತೆಯಿರುವ ಆ ಮನೆಯಲ್ಲಿ ಅಪೂ ಹೆಚ್ಚಾಗಿ ನಿಲ್ಲುವುದೇ ಇಲ್ಲ. ದಶಾಶ್ವಮೇಧ ಘಾಟಿನ ಅನೇಕ ಹುಡುಗರ ಜೊತೆ ಸ್ನೇಹ ಮಾಡಿಕೊಂಡು ಬಿಟ್ಟಿದ್ದ. ಆದರೆ ಇಲ್ಲಿನ ಹುಡುಗರಲ್ಲಿ ಅವನ ವಯಸ್ಸಿನವರೆಲ್ಲ ಸ್ಕೂಲಿನಲ್ಲಿ ಓದುತ್ತಾರೆ. ಅಪೂ ಒಬ್ಬನೇ ಸ್ಕೂಲಿಗೆ ಹೋಗದಿರುವವನು. ಅವರೊಂದಿಗೆ ಏನೂ ಓದದವನಾಗಿ ಇರುವುದು ನಾಚಿಕೆಯನ್ನುಂಟು ಮಾಡುತ್ತದೆ. ಹೀಗಾಗಿ ಮಾರ್ಗಶಿರ ಮಾಸದಲ್ಲಿ ತಂದೆಯೊಡನೆ ಹಠ ಹಿಡಿದು ಸ್ಕೂಲಿಗೆ ಸೇರಿದನು.

ಒಂದೊಂದು ದಿನ ಸಂಜೆ ಅಪೂ ಅಪ್ಪ ಪುರಾಣ ಹೇಳುತ್ತಿರುವುದನ್ನು ಕೇಳುತ್ತಾನೆ. ಜಿಂಕೆಯ ಮರಿಯೊಂದು ಗಾಯಗೊಂಡಿರುವಾಗ ರಾಜರ್ಷಿಯಾದ ಭರತನು ಅದನ್ನು ರಕ್ಷಿಸುವದು; ಅದು ಮತ್ತೆ ಬೇಡನ ಕೈಯಲ್ಲಿ ಬಿದ್ದಾಗ ಆ ರಾಜರ್ಷಿಯ ವಿಯೋಗ ದುಃಖ ಮತ್ತು ಕಡೆಯಲ್ಲಿ ಅವನ ವಿಷಾದಮಯ ಸಾವಿನ ಕಥೆಯನ್ನು ತಂದೆ ಏಕಚಿತ್ತದಿಂದ ಹರಿಕಥಾ ರೂಪದಲ್ಲಿ ಹೇಳುತ್ತಿರುವಾಗ ಅಪೂವಿನ ಕಣ್ಣಲ್ಲಿ ನೀರು ತುಂಬುತ್ತದೆ.

ಪ್ರತಿಯೊಂದು ಹರಿಕಥೆಯ ಕೊನೆಯಲ್ಲಿ ಹರಿಹರನು ಈ ಆಶೀರ್ವಾದ ಮಂತ್ರವನ್ನು ಹೇಳುತ್ತಿದ್ದುದು, ಅಪೂವಿನ ಮನಸ್ಸಿಗೆ ಬಹಳ ಚೆನ್ನಾಗಿರುತ್ತದೆ.

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ
ಸಸ್ಯಶಾಲಿನೀ. ಲೋಕಾಸ್ಸಂತು ನಿರಾಮಯಾಃ

ಮನೆಗೆ ಬಂದು ಕೈಯಲ್ಲಿ ಕಾಗದ ಲೇಖನಿ ಹಿಡಿದುಕೊಂಡು "ನನಗೆ ಅದನ್ನು ಬರೆದುಕೊಡಿ ಅಪ್ಪಾ, ನೀವು ಹೇಳುತೀರಲ್ಲಾ– ಕಾಲೇ ವರ್ಷತು ಪರ್ಜನ್ಯಃ" ಎಂದನು ಅಪೂ.

ಹರಿಹರನು ಆನಂದದಿಂದ "ನೀನೆಲ್ಲಿ ಕೇಳಿದೆಯೊ ?' ಎಂದು ಪ್ರಶ್ನಿಸಿದನು.

"ಓ, ನಿತ್ಯಾ ನಾನು ಅಲ್ಲಿರುತೀನಿ. ನಿನ್ನೆ ನಾನು ನಿಮ್ಮ ಹಿಂದುಗಡೆಗೇ ಕೂತಿದ್ದೆ."

ಅಪೂ ಒಂದು ಮಾತನ್ನು ಮಾತ್ರ ತಂದೆಯಿಂದ ಮುಚ್ಚಿಡುತ್ತಿದ್ದ. ಜೊತೆಯಲ್ಲಿ ಅವನ ಸ್ನೇಹಿತರು ಇದ್ದಾಗ ಅಪೂ ಆ ಪ್ರವಚನ ಸ್ಥಳಕ್ಕೆ ಹೋಗುವುದಿಲ್ಲ. ಒಂದು ದಿನ ಆ ಪಾರ್ಶ್ವದಲ್ಲಿಯೇ ಹೋಗಬೇಕಾಗಿ ಬಂತು.

ಅವರಪ್ಪ ಅವನನ್ನು ನೋಡಿದವನೇ "ಲೋ, ಅಪೂ, ಅಪೂ" ಎಂದು ಕೂಗಿದರೆ, ಅಪೂ ತಿರುಗಿ ನೋಡದೇ ಮುಂದೆ ಹೊರಟನು. ಅವನ ಸ್ನೇಹಿತ ನೊಬ್ಬ "ನಿನಗೆ ಅವರ ಗುರುತೇನೊ" ಎಂದು ಕೇಳಿದ್ದಕ್ಕೆ ಅಪು ಸುಮ್ಮನೆ ಹೂಂಗುಟ್ಟಿ, ಬೇರೆ ಯೋಚನೆ ಮಾಡುವವರಂತೆ ನಟಿಸಿದ. ಮತ್ತೇನಿಲ್ಲ. ಅವನ ಸ್ನೇಹಿತರು ಒಳ್ಳೆಯ ಸ್ಥಿತಿಯಲ್ಲಿದ್ದವರು. ತನ್ನ ಅಪ್ಪ ಘಾಟಿನ ಮೇಲೆ ಪುರಾಣ ಹೇಳಿಕೊಂಡಿರುವವನು ಎಂದರೆ ಅದೆಷ್ಟು ಮರ್ಯಾದೆಗೇಡು! ಇಷ್ಟೇ ಅಲ್ಲ. ಕಾಶಿಗೆ ತಾವು ಬಂದಿರುವುದು ಕೇವಲ ಹವಾ ಬದಲಾವಣೆ ಗೆಂದೂ ಊರಲ್ಲಿ ತಮಗೆ ದೊಡ್ಡ ಜಮೀನುದಾರಿಯಿದೆಯೆಂದೂ ಅವರೆದು ರಿಗೆ ಹೇಳಿದ್ದ. ಅವನ ಸ್ನೇಹಿತರ ವಯಸ್ಸು ಅವನಿಗಿಂತ ಹೆಚ್ಚೇನಲ್ಲ. ಅವನ ಬಡಾಯಿ ಮಾತುಗಳಿಗೂ ಅವನು ಉಟ್ಟಿದ್ದ ಉಡುಪಿಗೂ ಹೋಲಿಸಿ ಸಂದೇಹ ಪಡಲಿಲ್ಲ. ಅವನ ಮುಗ್ಧ ಗಾಂಭೀರ್ಯದ ಮುಖಚಹರೆಗಳು ಅವನ ಮಾತುಗಳಿಗೆ ಪುಷ್ಟಿ ಕೊಡುವಂತಿದ್ದುವು.

ಒಂದು ದಿನ ಹರಿಹರನು ಹಠಾತ್ತಾಗಿ ಮನೆಯನ್ನು ಪ್ರವೇಶಿಸಿ ಜಗು ಲಿಯ ಮೇಲೆ ಹುಸ್ಸೆಂದು ಕುಳಿತನು. ಸರ್ವಜಯಾ ಏನೊ ಕೆಲಸಮಾಡು ತ್ತಿದ್ದವಳು ಅವಸರದಿಂದ ಅಲ್ಲಿಗೆ ಬಂದಳು. "ಇದೇನು ? ಬೇಗ ಬಂದು ಬಿಟ್ಟಿರಿ ?" ಎಂದು ಕೇಳುತ್ತ ಗಂಡನ ಮುಖ ನೋಡಿದರೆ, ಅವನ ಕಣ್ಣುಗಳು ದಾಸವಾಳದ ಹೂವಿನಂತೆ ಕೆಂಪಾಗಿದ್ದುವು. ಅವನಿಗೆ ಜ್ವರ ಬಂದಿದೆಯೆಂದು ಗೊತ್ತಾಯಿತು. ಆಕೆ ಒರಗುತ್ತ "ಮಗು ಎಲ್ಲಿ? ಲೊ, ಅಪೂ ?" ಎಂದು ಕೂಗಿದಳು.

ಅಪೂ ಆಗ ಮೇಲಿನ ಮುಹಡಿಯಲ್ಲಿರುವ ನಂದಬಾಬುಗಳ ಮನೆಯ ಬಿಸಿಲು ಮಾಳಿಗೆಯ ಮೇಲೆ ಕುಳಿತು ಏನೊ ಪುಸ್ತಕ ಓದುತ್ತಿದ್ದ. ಅವರ

ಕೋಣೆಯ ಬೀರುವಿನಲ್ಲಿ ಪುಸ್ತಕಗಳಿದ್ದುದನ್ನು ಅದಾವಾಗಲೋ ಕಂಡು ಅವರ ಸ್ನೇಹ ಬೆಳೆಸಿಕೊಂಡು ಬಿಟ್ಟಿದ್ದ. ಪುಸ್ತಕಗಳನ್ನು ತರುತ್ತಿದ್ದ. ನಂದಬಾಬು ವಿನ ವಯಸ್ಸು ಎಷ್ಟೆಂದು ತಿಳಿಯದು. ತನ್ನ ತಂದೆಗಿಂತ ಚಿಕ್ಕವರೆಂದಷ್ಟು ಗೊತ್ತು. ಅವರು ಸಾಯಂಕಾಲ ತಲೆಗೂಲನ್ನು ಚೆನ್ನಾಗಿ ಬಾಚಿ ಒಳ್ಳೇ ಸೊಗ ಸಾದ ಜುಬ್ಬಾ ತೊಟ್ಟು, ಯಾವುದೊ ಗಂಧವನ್ನು ಮೈಗೆ ಪೂಸಿಕೊಂಡು ತಿರುಗಾಡಲು ಹೋಗುತ್ತಿದ್ದರು. ಅಪೂ ಮೈಮೇಲೂ ಒಂದು ದಿನ ಆ ಗಂಧದ ಎಣ್ಣೆಯನ್ನು ಹಚ್ಚಿದ್ದರು. ಒಳ್ಳೇ ಘಮ ಘಮ ವಾಸನೆ.

ಒಂದು ಸಂಜೆ ಅವರ ಕೋಣೆಯೊಳಗೆ ಪ್ರವೇಶಿಸಿದಾಗ, ಅವರು ತಮ್ಮ ಅಲಮಾರುವಿನಿಂದ, ಒಂದು ಬಾಟಲನ್ನು ಹೊರತೆಗೆದು ಎಂಥದೊ ಕೆಂಪು ಔಷಧಿಯನ್ನು ಕುಡಿಯುತ್ತಿದ್ದರು. ಅಪೂ ಒಳಗೆ ಬರುತ್ತಲೂ ಗದರಿಸಿ ಕಳುಹಿದರು. ಹಾಗೆ ಗದರಿಸಿದುದೇಕೆಂದು ಅವನಿಗೆ ಅರ್ಥವಾಗಲಿಲ್ಲ. ಮತ್ತೊಮ್ಮೆ ಅವರು ತಮ್ಮ ತಿರುಗಾಟವನ್ನು ಮುಗಿಸಿ ಬಂದಾಗ ಕತ್ತಲೆ ಯಾಗಿದ್ದಿತು. ತಾನು ಓದಿ ಮುಗಿಸಿದ್ದ ಪುಸ್ತಕವನ್ನು ಹಿಂತಿರುಗಿಸಿ ಇನ್ನೊಂದನ್ನು ತರಲೆಂದು ಹೋದಾಗ, ಅವರ ಕೋಣೆಯಲ್ಲಿ ಒಬ್ಬ ಹೆಂಗಸು ಕೂತಿದ್ದಳು. ಅವನನ್ನು ಕಂಡು ನಂದಬಾಬು "ಈಗೇಕೆ ಬಂದೆಯೊ ? ಈಕೆ ನನ್ನ ನಾದಿನಿ. ನೋಡಿಕೊಂಡು ಹೋಗುವುದಕ್ಕೆ ಬಂದಿದಾಳೆ. ಈಗಲೇ ಹೊರಟು ಹೋಗುತ್ತಾಳೆ. ನೀನು ಹೊರಡು ಇಲ್ಲಿಂದ" ಎಂದರು. ಅಪೂ ಹಿಂದಿರುಗಿ ಬರುತ್ತಿದ್ದಾಗ ನಂದಬಾಬು ಹೇಳುತ್ತಿದ್ದುದು ಕೇಳಿಸಿತು. "ಅವನು ನಮ್ಮ ಕೆಳಗಡೆ ಬಾಡಿಗೆಗೆ ಇದ್ದಾರಲ್ಲ, ಅವರ ಮಗ. ಅವನಿಗೇನು ಅಂಥಾದ್ದು ತಿಳಿಯುವದಿಲ್ಲ. ಬಿಡು."

ಹರಿಹರನ ಜ್ವರ ಸ್ವಲ್ಪ ಕಡಿಮೆಯಾಗಿತ್ತು. ಅಪೂ ಸ್ಕೂಲಿನಿಂದ ಬಂದು ಪುಸ್ತಕಗಳನ್ನು ಕೆಳಗೆ ತೆಗೆದಿಡುತ್ತಿದ್ದ. ಕಾಲಿನ ಶಬ್ದ ಕೇಳಿ ಹರಿ ಹರನು "ಮಗೂ ಬಾರೋ ಇಲ್ಲಿ. ಹತ್ತಿರ ಕುಳಿತುಕೋ ಮಗೂ" ಎಂದು ಕರೆದನು.

ಅಪೂ ಬಂದು ಸ್ಕೂಲಿನ ವಿಚಾರವಾಗಿ ಏನೇನೊ ಹೇಳಿದ. ನಗು ಮುಖದಿಂದ ಸಣ್ಣ ದನಿಯಲ್ಲಿ "ಈಗ ಎರಡು ತಿಂಗಳಿನಿಂದ ಸ್ಕೂಲಿಗೆ

ಹೋಗುತ್ತ ಇದ್ದೀನಿ, ಅಪ್ಪ. ಇಷ್ಟರಲ್ಲೇ ನನ್ನನ್ನು ಕಂಡರೆ ಸ್ಕೂಲಿನವರೆಲ್ಲ ರಿಗೂ ಇಷ್ಟವಾಗಿಬಿಟ್ಟಿದೆ. ಪ್ರತಿನಿತ್ಯವೂ ನನ್ನನ್ನೆ ಫಸ್ಟ್ ಕೂಡಿಸುತ್ತಾರೆ. ನಮ್ಮ ಕ್ಲಾಸಿನ ಹುಡುಗರು ಇಷ್ಟರಲ್ಲೇ ಒಂದು ಪತ್ರಿಕೆ ಅಚ್ಚು ಹಾಕಿಸುತ್ತಾ ರಂತೆ, ನನ್ನನ್ನು ಆ ಗುಂಪಿಗೆ ಸೇರಿಸಿಕೊಂಡಿದ್ದಾರೆ."

ಹರಿಹರನ ಹೃದಯದೊಳಗೆ ಮಮತೆಯ ತೀವ್ರ ವೇದನೆಯೊಂದು ಉಂಟಾಯಿತು. ಅಪ್ಪೂ ಕಾಗದವೊಂದನ್ನು ಹೊರತೆಗೆದು "ನೋಡಪ್ಪ ಒಂದು ಕಥೆ ಬರೆದಿದೀನಿ. ಇದನ್ನು ಅಚ್ಚು ಹಾಕಿಸುತ್ತಾರಂತೆ ನನ್ನ ಹೆಸರಿ ನಲ್ಲೇ. ಆದರೆ ಎರಡು ರೂಪಾಯಿ ಚಂದಾ ಕೊಟ್ಟರೆ ಮಾತ್ರ ಅಂತೆ. ಕೊಡುತ್ತೀಯಾ ಎರಡು ರೂಪಾಯಿ ?"

ಹರಿಹರನು ಅತ್ಯಂತ ಕುತೂಹಲದಿಂದ ಮಗ ಬರೆದ ಕಥೆಯನ್ನು ಓದಿದನು. ರಾಜಪುತ್ರನೊಬ್ಬನ ಮೃಗಯಾವಿಹಾರದ ಕಥೆ. ಸುಂದರವಾದ ಭಾಷೆ. ಹರಿಹರನು ಸಂತೋಷವನ್ನು ತಡೆಯಲಾರದೆ ತಲೆದಿಂಬನ್ನು ಊರಿ ಕೊಂಡು ಎದ್ದು ಕುಳಿತನು. "ಲೋ, ನೀನು ಬರೆದಿದ್ದೇನೊ ಇದೆಲ್ಲ ? ಎಷ್ಟು ಚೆನ್ನಾಗಿದೆಯಲ್ಲೊ. ಭೇಷ್ ಮಗು ಭೇಷ್."

ಸರ್ವಜಯಾ ರೂಪಾಯಿ ಸುದ್ದಿ ಕೇಳಿ, ಕೊಡುವುದಕ್ಕೆ ಒಡಂಬಡಲಿಲ್ಲ. ಗಂಡ ಕಾಯಿಲೆ ಮಲಗಿದ್ದಾನೆ. ಸಂಸಾರಕ್ಕೇನೆ ಸಾಲದು ಹಣ.

ಹರಿಹರನು ಹೇಳಿದ, "ಹೋಗಲಿ ಕೊಡೆ, ಪರವಾಯಿಲ್ಲ. ಮಗು ಬರೆದಿದ್ದಾನೆ. ಅಚ್ಚು ಹಾಕಿಸಿಕೊಂಡು ಬರಲಿ. ವಾಸಿಯಾಗಿ, ಸ್ವಲ್ಪ ಪಥ್ಯಗಿಥ್ಯ ಮಾಡಿಕೊಂಡು ಬಿಟ್ಟರೆ, ದೇವಸ್ಥಾನದಲ್ಲಿ ಭಾಗವತ ಪಾರಾಯಣ ಇದ್ದೇ ಇದೆ, ಅದರಲ್ಲೇ ಹತ್ತಿಪ್ಪತ್ತು ರೂಪಾಯಿ ಸಿಗುತ್ತೆ" ಎಂದು ಸಮಾಧಾನ ಹೇಳುತ್ತ ರೂಪಾಯಿ ಕೊಡಿಸಿದನು.

ಹುಚ್ಚು ಹುಡುಗ ತನ್ನ ಮಗು ! ಏನೂ ತಿಳಿಯದು. ಅವನ ಆ ಹಣೆ, ಆ ಕಣ್ಣುಗಳು ಅವನ ಅಮ್ಮನವೇ ! ಹರಿಹರನು ಮದುವೆಯಾಗಿ ಮೊದಲ ಪ್ರಾಯದಲ್ಲಿ ಹೆಂಡತಿಯನ್ನು ಮನೆಗೆ ಕರೆತಂದಾಗ, ಹೊಸ ಮದು ಮಗಳಾಗಿದ್ದ ಸರ್ವಜಯಾಳ ಮುಗ್ಧ ಮುಖದಲ್ಲಿ ಆಡುತ್ತಿದ್ದ ಅದೇ ನಗುವೇ

ಇಂದು ಈ ಹನ್ನೊಂದು ವರ್ಷದ ಅಪ್ಪೂವಿನ ಸರಳ ಸುಂದರ ಮುಖದಲ್ಲಿ ಕಾಣುತ್ತಿರುವುದು! ಅವನ ದೊಡ್ಡ ನೀಲಿಯ ಕಣ್ಣುಗಳ ದೃಷ್ಟಿಯು ಆಚೆಗೆ ತನ್ನ ಸ್ವಂತದ ಗತಿಸಿ ಹೋದ ಯೌವನದ ದಿನಗಳ ಸ್ವಪ್ನಗಳು ಕಾಣಿಸುತ್ತಲಿವೆ. ಅಕಸ್ಮಾತ್ ಹರಿಹರನ ಎದೆಯೊಳಗೆ ಪ್ರೀತಿಯು ಬುಗ್ಗೆಯುಕ್ಕಿ ಕಣ್ಣುಗಳಲ್ಲಿ ನೀರು ತುಂಬುವದು.

ಮಾರನೆಯ ದಿನ ಬೆಳಿಗ್ಗೆ ಹರಿಹರನ ಜ್ವರ ಹೆಚ್ಚಾಯಿತು. ಸರ್ವ-ಜಯಾ ಹೆದರಿ ಡಾಕ್ಟರರನ್ನು ಕರೆಯಿಸಿದಳು ಡಾಕ್ಟರರು "ಚನ್ನಾಗಿ ಶೀತ ತಗುಲಿಬಿಟ್ಟಿದೆ. ಬ್ರಾಂಕೋ ನಿಮೋನಿಯಾ. ಚನ್ನಾಗಿ ನರ್ಸಿಂಗ್ ಮಾಡಬೇಕು. ಕೆಳಗಿನ ಮನೆಗಳು ಹೀಗೇ ಇರುತ್ತವೇನು? ಲೋ ಮಗೂ, ಒಂದು ಶೀಸೆ ತಗೊಂಡು ನನ್ನ ಜೊತೆ ಬಾ" ಎಂದು ಕರೆದುಕೊಂಡು ಹೋದರು.

ಅಪ್ಪೂ ಅವರ ದವಾಖಾನೆಗೆ ನಿತ್ಯವೂ ಹೋಗಿ ಔಷಧಿ ತರುತ್ತಿದ್ದ. ಹೆಚ್ಚು ಫಲವೇನು ಕಂಡು ಬರಲಿಲ್ಲ. ಹರಿಹರನು ನಿಶ್ಯಕ್ತನಾಗುತ್ತ ನಡೆದ. ದುಡ್ಡೆಲ್ಲ ಕೈಬಿಟ್ಟು ಹೋಯಿತು. ಪರದೇಶ. ನೀನೇ ಅನ್ನುವವರಿಲ್ಲ. ಯಾರ ಆಸರೆಯನ್ನು ಕೇಳುವುದು? ಸರ್ವಜಯಾ ನಾಲ್ಕೂ ದಿಕ್ಕುಗಳಲ್ಲಿ ಕತ್ತಲನ್ನೇ ಕಂಡಳು.

ಒಳ್ಳೆ ಮಧ್ಯಾಹ್ನದ ಹೊತ್ತು. ರಾತ್ರಿಯ ಜಾಗರಣೆಯಿಂದ ಸರ್ವ-ಜಯಾಳು ನೆಲದ ಮೇಲೆ ಸೆರಗು ಹಾಸಿಕೊಂಡು ಮಲಗಿ ನಿದ್ದೆ ಮಾಡುತ್ತಿದ್ದಳು. ನಿಶ್ಶಕ್ತಿಯಿಂದಲೂ ಜ್ವರದ ತಾಪದಿಂದಲೂ ಹರಿಹರನಿಗೆ ಪ್ರಜ್ಞೆ ಇರುವುದು ಕಡಿಮೆ ಎಂಬ ಸ್ಥಿತಿಯಿತ್ತು. ಇದ್ದಕ್ಕಿದ್ದಂತೆ ಕಣ್ಣು ಬಿಟ್ಟು ಅಲ್ಲಿಯೆ ಆಟವಾಡುತ್ತ ಕುಳಿತಿದ್ದ ಮಗನ ಕಡೆ ನೋಡಿದನು. ಅಪ್ಪೂ ಅಪ್ಪನ ಹಾಸುಗೆಯ ಬಳಿಸಾರಿದನು. ಹರಿಹರನು ತನ್ನ ರೋಗಶೀರ್ಣವಾದ ಎರಡು ಕೈಗಳನ್ನು ಪ್ರಯಾಸದಿಂದ ಎತ್ತಿ ಮಗನ ಗಲ್ಲವನ್ನು ಹಿಡಿದುಕೊಂಡು ನೀರವವಾಗಿ ನೋಡತೊಡಗಿದನು. ಅಪ್ಪೂವಿಗೆ ತಬ್ಬಿಬ್ಬಾಯಿತು. ಅವರಪ್ಪನ ಕಣ್ಣುಗಳಲ್ಲಿ ಇಂತಹ ದೃಷ್ಟಿಯನ್ನು ಹಿಂದೆಂದೂ ನೋಡಿರಲಿಲ್ಲ.

ರಾತ್ರಿ ಕಡೆಯ ಜಾವವಿರಬೇಕು. ಸರ್ವಜಯಾ ಮಗನನ್ನು ಬಡಿದು ಎಬ್ಬಿಸಿದಳು. "ಅಪೂ, ಹೋಗು ಬೇಗ. ಮಹಡಿಯ ಮೇಲಿನ ಆ ಪಂಜಾಬಿ ಗೃಹಸ್ಥನನ್ನು ಕರೆದುಕೊಂಡು ಬಾ" ಎಂದು ಕಳಿಸಿದಳು. ಹರಿಹರನ ಗಂಟಲಿನಿಂದ ಶಬ್ದಗಳು ಹೊರಡದೇ ಘೊರ್ ಘೊರ್ ಎಂಬ ಸದ್ದು ಹೊರಡುತ್ತಿತ್ತು. ಬಹು ಪ್ರಯಾಸದಿಂದ ಉಸಿರಾಡಿಸುತ್ತಿದ್ದ. ಮಹಡಿಯ ಮೇಲಿಂದ ಜನ ಬರುವದರೊಳಗಾಗಿ ಅವನ ಉಸಿರಾಟ ನಿಂತು ಹೋಗಿದ್ದಿತು.

ಆ ಭೀಕರ ಗಳಿಗೆಗಳನ್ನು ಸರ್ವಜಯಾ ಅದೆಂತು ಕಳೆದಳೋ ! ಅವಳ ಬುದ್ಧಿ ಶೂನ್ಯವಾಗಿಬಿಟ್ಟಿತ್ತು. ಇಂತಹ ವಿಪತ್ತಿನಲ್ಲಿ ಆ ಪಂಜಾಬೀ ದಂಪತಿಗಳು ಎಷ್ಟೋ ನೆರವಾದರು. ಆ ಗೃಹಸ್ಥ ತನ್ನ ಕಚೇರಿಯ ನೌಕರರ ಮೂಲಕ ಅವರ ಕರ್ಮಗಳಿಗಾಗಿ ಬಂಗಾಳಿ ಜನರನ್ನು ಹುಡುಕಿಸಿದನು.

ಮಣಿಕರ್ಣಿಕಾ ಘಾಟಿನಲ್ಲಿ ಅಪರಕರ್ಮಗಳನ್ನು ಮುಗಿಸಿದ ಮೇಲೆ ಸಂಜೆಯ ಹೊತ್ತು ಅಪೂ ಸ್ನಾನ ತೀರಿಸಿಕೊಂಡು, ಚಳಿಯಿಂದ ನಡುಗುತ್ತ ಮೆಟ್ಟಿಲನ್ನು ಹತ್ತಿಬಂದ. ರಾಮಕೃಷ್ಣ ಮಿಶನ್ನಿನವರು ಕಳುಹಿಸಿದ್ದ ಓರ್ವ ಸ್ವಯಂಸೇವಕನು ಅವನಿಗೆ ಉತ್ತರೀಯವನ್ನು ಉಡಿಸುವುದಕ್ಕೆ ನೆರವಾದನು.

ಇಡೀ ದಿನದ ಘಟನೆಗಳಿಂದ ಅಪೂವಿನ ಬುದ್ಧಿ, ಉತ್ಸಾಹಗಳು ಕುಗ್ಗಿ ಹೋಗಿವೆ. ಬಡತನ, ರೋಗಿಗಳಿಂದ ಬಳಲಿದ, ಚಿತೆಯಲ್ಲಿ ಉರಿದು ಹೋದ ತಂದೆಯ ಜ್ಞಾಪಕವೇ ಇಲ್ಲ ಅವನಿಗೆ. ಬದಲಾಗಿ ನಗು ಮುಖದ, ಸುಸ್ವರದಲ್ಲಿ 'ಕಾಲೇ ವರ್ಷತು ಪರ್ಜನ್ಯಃ' ಮಂತ್ರ ಹೇಳುವ ತಂದೆಯ ನೆನಪು ಮಾತ್ರ ಶಾಶ್ವತವಾಗಿ ಉಳಿದಿದೆ.

[೬]

ಯಾವುದೋ ರೀತಿಯಲ್ಲಿ ಒಂದು ತಿಂಗಳು ಕಳೆಯಿತು. ಮುಂದಿನ ಜೀವನಮಾರ್ಗದ ಯೋಚನೆಯಿಂದಾಗಿ ಸರ್ವಜಯಾ ಇನ್ನೂ ಬದುಕಿದ್ದಳು... ಊರಿಗೆ ಮರಳುವುದೆ ? ಊರನ್ನು ಬಿಟ್ಟು ಒಂದು ವರ್ಷ ಪೂರ್ತಿಯಾಗಲಿಲ್ಲ. ಈ ರೀತಿ ನಿಸ್ಸಹಾಯಳಾಗಿ, ದೀನವಾದ ಅವಸ್ಥೆಯಲ್ಲಿ ವಿಧವೆಯ ವೇಷದಲ್ಲಿ ಊರವರ ಮುಂದೆ ನಿಲ್ಲಬೇಕೆ? ಅದಕ್ಕಿಂತ ಅಪೂವನ್ನು ಮುಂದಿಟ್ಟುಕೊಂಡು ಕಾಶಿಯಲ್ಲೇ ಭಿಕ್ಷೆಬೇಡುತ್ತ ತಿರುಗಿದರೆ ಯಾರು ನೋಡುತ್ತಾರೆ— ಇಲ್ಲಿ ?

ಒಂದು ತಿಂಗಳಾದ ಮೇಲೆ ಸ್ವಲ್ಪ ಅನುಕೂಲವಾಯಿತು. ಬೇರೊಂದು ಊರಿನ ಧನಿಕರೊಬ್ಬರಿಗೆ ಕುಲೀನೆಯಾದ ಅಡಿಗೆಯುವಳೊಬ್ಬಳು ಬೇಕಾಗಿದ್ದಾಳೆಂದು ತಿಳಿಯುಬಂತು. ಸರ್ವಜಯಾ ತೀರವಿಲ್ಲದ ಸಮುದ್ರದಲ್ಲಿ ತೀರ ಕಂಡಳು; ಕೆಲಸಕ್ಕೆ ಒಪ್ಪಿಕೊಂಡು ಮಗನನ್ನು ಕರೆದುಕೊಂಡು ಹೊರಟಳು. ವಿಸ್ತಾರವಾದ ಹಳದಿ ಬಣ್ಣದ ಆ ದೊಡ್ಡ ಮನೆ ಅಲ್ಲ, ಮಹಲನ್ನು ಸಂಕೋಚದಿಂದ ಪ್ರವೇಶಿಸಿದಳು.

ಅಡಿಗೆಯ ಕೆಲಸಕ್ಕೆ ತಾನೊಬ್ಬಳೇ ಅಲ್ಲ, ಇನ್ನೂ ನಾಲ್ಕೈದು ಜನ ಇದ್ದಾರೆಂಬುದು ಅವಳಿಗೆ ಅಚ್ಚರಿಯನ್ನುಂಟುಮಾಡಿತು. ಅವಳ ಎಣಿಕೆಗೆ ಮೀರಿ ಅವರು ಶ್ರೀಮಂತರಿದ್ದರು.

ಸರ್ವಜಯಾ ಕೆಳ ಅಂತಸ್ತಿನಲ್ಲಿ ಹಿಂದುಗಡೆಯ ಒಂದು ಕೋಣೆಯಲ್ಲಿ ವಾಸಿಸುತ್ತಿದ್ದಳು. ಅಲ್ಲಿಯ ನೆಲವೂ ತೇವವಾಗಿದ್ದಿತು. ಅದರಿಂದಲೊ ಏನೊ, ಒಂದು ತರದ ದುರ್ವಾಸನೆ ಸದಾ ತುಂಬಿರುತ್ತಿತ್ತು. ಹೊರಗಿನಿಂದ ಪ್ರವೇಶಮಾಡಿದಾಗಲೆಲ್ಲ ಅಪೂ "ಥೂ ಏನಮ್ಮಾ ಹಳೇ ಮುಗ್ಗಿದ ಅಕ್ಕಿಯ ವಾಸನೆ ಬಂದಹಾಗೆ ದುರ್ವಾಸನೆ, ಅಲ್ಲವೇನಮ್ಮಾ ?" ಎನ್ನುವನು.

ಎಲ್ಲರ ಊಟ, ತಿಂಡಿಗಳಾದ ಮೇಲೆ ಸರ್ವಜಯಾ ಕೆಲಸ ಮುಗಿಸಿ ಮಧ್ಯಾಹ್ನ ಎರಡೂವರೆ ಗಂಟೆಯ ಹೊತ್ತಿಗೆ ತನ್ನ ಕೋಣೆಗೆ ಬಂದು ಸ್ವಲ್ಪ-ಹೊತ್ತು ಮಲಗುತ್ತಿದ್ದಳು. ಅಪೂವಿಗೂ ಅವಳಿಗೂ ಭೆಟ್ಟಿಯಾಗಿ ಮಾತನಾಡುವ ಸಮಯವೆಂದರೆ ಅದಷ್ಟೇ ಎನ್ನುವಷ್ಟು ಅಡಿಗೆಯ ಮನೆಯ ಕೆಲಸ ಅವಳ ಪಾಲಿಗೆ ಇರುತ್ತಿತ್ತು. ರಾತ್ರಿ ಅವಳು ತನ್ನ ಕೋಣೆಗೆ ಬರುವಷ್ಟರಲ್ಲಿ ಅಪೂ ನಿದ್ರೆ ಹೋಗಿರುತ್ತಿದ್ದ. ಅದಕ್ಕಾಗಿಯೇ ಆ ಸಮಯವನ್ನು ಆಕೆ ಆತುರದಿಂದ ಕಾಯುತ್ತಿದ್ದಳು.

ಬಾಗಿಲಲ್ಲಿ ಕಾಲು ಸಪ್ಪಳ ಕೇಳುತ್ತಲೂ "ಯಾರದು ? ಅಪೂ?" ಎಂದಳು. ಅಪೂ ಅಮ್ಮನ ತೊಡೆಯ ಪಕ್ಕದಲ್ಲಿ ಬಂದು ಅವಳಿಗೆ ಒರಗಿಕೊಂಡು ಕುಳಿತನು. ಅವರಮ್ಮ ಅವನ ಗಲ್ಲವನ್ನು ಹಿಡಿದು "ಎಲ್ಲಿದ್ದೆಯೊ ಮಧ್ಯಾಹ್ನವೆಲ್ಲ ?" ಎಂದಳು. ಅಪೂ ನಗುತ್ತ "ಮೇಲುಗಡೆ ಬೈಠಕಖಾನೆಯಲ್ಲಿ ಯಂತ್ರವೊಂದು ಹಾಡು ಹೇಳುತ್ತೆ ಅಮ್ಮಾ ! ಕೇಳುತ್ತಾ ಇದ್ದೆ"

ಎಂದನು... ಆ ದೊಡ್ಡ ಮನೆಯಲ್ಲಿ ಹಲವಾರು ಜನ ಮಕ್ಕಳಿದ್ದರೂ ಅವನಿಗೆ ಯಾರ ಗುರುತೂ ಆಗಿಲ್ಲ, ಯಾರೂ ಅವನನ್ನು ಮಾತನಾಡಿಸಿದ್ದೂ ಇಲ್ಲ.

ಆದರೆ ಈ ರೀತಿಯ ಪರಾಧೀನ ಅವಸ್ಥೆಯಲ್ಲಿ ದಿನ ತೆಗೆಯುವುದು ಸರ್ವಜಯಾಳಿಗೆ ಅಸಹನೀಯವಾಯಿತು. ಸುಖವೊ ದುಃಖವೊ ಇಷ್ಟು ದಿನವೂ ಅವಳು ತನ್ನ ಸ್ವಂತ ಮನೆಯ ಏಕಮಾತ್ರ ಒಡತಿಯಾಗಿದ್ದಳು. ದರಿದ್ರ ಸಂಸಾರದ ಮಹಾರಾಣಿ, ಇಲ್ಲಿಯೊ ಯಾವಾಗಲೂ ಯಾರಿಗಾದರೂ ಹೆದರಿಕೊಂಡೇ ಇರಬೇಕು. ಇನ್ನೊಬ್ಬರ ಮುಖನೋಡಿಕೊಂಡು ಕಾದಿರ ಬೇಕು. ಚಿಕ್ಕವರಿಗಿಂತಲೂ ಚಿಕ್ಕವಳಾಗಿರಬೇಕು.

ಮುಂದೆ ಕೆಲವು ದಿನಗಳಲ್ಲಿ ದೊಡ್ಡ ಯಜಮಾನರ ಮಗಳ ಮದುವೆಯ ನಿಮಿತ್ತ ಮನೆಯಲ್ಲಿ ವಿಶೇಷ ವೈಭವದಿಂದ ಸಿದ್ಧತೆಗಳು ನಡೆಯಲಾರಂಭಿಸಿದುವು. ದೊಡ್ಡ ಯಜಮಾನಿ ಸರ್ವಜಯಾಳನ್ನು ಕರೆದು "ಅಪೂವಿನ ತಾಯೀ, ಅನಕಾ ಕೆಲ ದಿನ ಅಡಿಗೆಯ ಉಸಾಬರಿಗೆ ಹೋಗಬೇಡ. ಬೇರೆ ಬೇರೆ ಕಡೆಯಿಂದ ಬಾಗಿನ ಬಹುಮಾನಗಳು ಬರುತ್ತವೆ. ಅವುಗಳನ್ನು ಇಸಕೊಂಡು ಬಂದು ಕೋಠಿಯ ಕೋಣೆಯಲ್ಲಿ ವ್ಯವಸ್ಥಿತವಾಗಿ ಇಡಬೇಕು" ಎಂದು ನಿಯುಕ್ತ ಮಾಡಿದರು. ಉಳಿದವರ ಹಾಗೆ ಅವುಗಳನ್ನು ಆಕೆ ಅಪಹರಿಸುವವಳಲ್ಲ ಎಂದು ವಿಶ್ವಾಸದಿಂದ ಆ ಕೆಲಸ ಅವಳ ಪಾಲಿಗೆ ಬಂದಿದ್ದಿತು. ಅಬ್ಬಾ, ಅದೆಷ್ಟು ಬಗೆಯ ತಿಂಡಿಗಳು, ಹಣ್ಣು ಹಂಪಲುಗಳು. ಅವುಗಳ ಲೆಕ್ಕವನ್ನು ಇಡುವುದೇ ಆಗಲಿಲ್ಲ. ಕೋಣೆ ತುಂಬಿಹೋಯಿತು.

ಮದುವೆಯ ಉತ್ಸವದ ಅಂಗವಾಗಿ ಇಂದು ಹೆಂಗಸರ ಪ್ರೀತಿ-ಭೋಜನ. ಎರಡನೆಯ ಅಂತಸ್ತಿನಲ್ಲಿರುವ ವರಾಂಡದಲ್ಲಿ, ಮನೆಯ ದೊಡ್ಡ ಸೊಸೆಯು ಸ್ವಾಗತಕ್ಕಾಗಿ ನಿಂತುಕೊಂಡಿದ್ದಳು. ಬಂದವರ ಕುಶಲವನ್ನು ಕೇಳಿ ಮೇಲಕ್ಕೆ ಕಳುಹಿಸುತ್ತಿದ್ದಳು. ಅವಳ ವಯಸ್ಸು ಮೂವತ್ತು ಇರಬಹುದು. ಅಪೂರ್ವ ಸುಂದರಿಯಾದ ಆಕೆಯ ಉಡುಪಿನಲ್ಲಿ ಯಾವುದೂ ಅತಿಯಾಗಿರಲಿಲ್ಲ. ಸಂಪಿಗೆ ಬಣ್ಣದ, ಮತ್ತು ಅಗಲವಾದ ಕೆಂಪು ಅಂಚಿನ ರೇಶಿಮೆಯ ಸೀರೆ ಯನ್ನುಟ್ಟು, ಸೆರಗನ್ನು ತಲೆಯ ಮೇಲೆ ಹೊದ್ದುಕೊಂಡಿದ್ದಳು. ಮೆಟ್ಟಿಲು

ಗಳ ಮೇಲುಗಡೆಯ ಗ್ಯಾಸ್ ದೀಪದ ಬೆಳಕಿನಲ್ಲಿ ಆಕೆಯ ಕಂಠದಲ್ಲಿ ಧರಿಸಿದ್ದ ಅಪರಂಜಿ ಚಿನ್ನದ ಹಾರವು ಚಕ್ ಚಕ್ ಎಂದು ಹೊಳೆಯುತ್ತಿತ್ತು. ಗಂಭೀರ ವಾದ ನಿಲುವು. ಹಾಲಿನಲ್ಲಿ ಅರಿಸಿನ ಮಿಶ್ರ ಮಾಡಿದ ಬಣ್ಣದ ಅಪೂರ್ವ ಅಂದ ಆಕೆಯದು.

ಅಪೂ ಕೆಳಗಡೆಯ ವರಾಂಡದ ಕಂಭವೊಂದರ ಹತ್ತಿರ ನಿಂತು ಬಹಳ ಹೊತ್ತಿನಿಂದ ಈ ದೃಶ್ಯವನ್ನೆಲ್ಲ ನೋಡುತ್ತಿದ್ದ. ಕಣ್ಣು ಕೋರೈಸುವ ಬೆಳಕು, ಈ ಚೆಲುವೆಯರ ತಂಡ, ವೀಣೆಯ ಝೇಂಕಾರದಂತೆ ಇದ್ದ ಅವರ ಮಾತು.

ಈ ಅಪರಿಚಿತ ಹುಡುಗನ ಕಣ್ಣುಗಳನ್ನು ಮಿಕ ಮಿಕ ನೋಡುತ್ತಿದ್ದು ದನ್ನು ದೊಡ್ಡ ಸೊಸೆ ಸ್ವಲ್ಪ ಹೊತ್ತಿನಿಂದ ಗಮನಿಸುತ್ತಿದ್ದಳು. ಎರಡು ಮೆಟ್ಟಿಲುಗಳನ್ನಿಳಿದು ಬಂದು "ಬಾರೋ ಮಗು ಮೇಲಕ್ಕೆ ಹತ್ತಿಬಾ" ಎಂದು ಕರೆದಳು.

ಅಪೂ ತನ್ನ ಹಿಂದೆ ನೋಡಿದ, ಬೇರೆ ಯಾರನ್ನಾದರೂ ಕರೆಯುತ್ತಿರ ಬೇಕೆಂದು. ಕರೆಯುತ್ತಿದ್ದುದು ತನ್ನನ್ನೇ ಎಂಬುದು ಅವಳ ಸಂಜ್ಞೆಯಿಂದ ತಿಳಿಯಿತು. ಹತ್ತಿರ ಕರೆದು ಅವಳು ತನ್ನನ್ನು ಬೈದು ಹೊರಗೆ ಅಟ್ಟುತ್ತಾಳೆ ಎಂದು ಹೆದರಿದ. ಹೊರಗೆ ಓಡಿ ಹೋಗಲೇ ಎಂಬ ಯೋಚನೆ ಬಂದಿತು. ಆದರೂ ಅವಳ ನಡೆ ನಡು ಅವನನ್ನು ಅಲ್ಲಿ ಕಟ್ಟಿ ಹಾಕಿದ್ದಿತು. ಆಕೆಯೇ ಕೆಳಗಿಳಿದು ಬಂದು "ಎಲ್ಲಿಂದ ಬಂದಿದ್ದೀಯೋ ಮಗೂ ?" ಎಂದು ಮೃದು ವಾಗಿ ಕೇಳಿದಳು. ಅವನು ತಬ್ಬಿಬ್ಬಾಗಿ, ತೊದಲುತ್ತ, ಹೇಳಿದ್ದರ ಮೇಲೆ, ಕಾಶಿಯಿಂದ ಹೊಸದಾಗಿ ಬಂದಿದ್ದ ಅನಾಥ ವಿಧವೆಯ ಮಗ ಎಂದು ತಿಳಿ ಯಿತು. ಅವನನ್ನು ಕೈ ಹಿಡಿದು ಮೇಲಕ್ಕೆ ಕರೆದುಕೊಂಡು ಹೋದಳು.

ಮೇಲುಗಡೆಯ ದೊಡ್ಡ ವರಾಂಡದಲ್ಲಿ ಹೆಂಗಸರ ಕೂಟ. ವರಾಂಡದ ಆದ್ಯಂತವೂ ರತ್ನಗಂಬಳಿ ಹಾಸಿದ್ದಿತು. ಹೆಂಗಸರ ಕಿಲ ಕಿಲ. ಒಬ್ಬ ಹೆಂಗಸು, ಅತ್ಯಂತ ಬಿಗುಮಾನದಿಂದ ಪಿಯಾನೋದ ಮುಂದೆ ಕಳಿತು ಹಾಡು ಹೇಳಿದಳು. ಅವಳ ನಂತರ ಮತ್ತೆ ಒಬ್ಬಿಬ್ಬರು. ಅನಂತರ ೧೦–೧೧ ವರ್ಷದ ಒಬ್ಬ ಚಿಕ್ಕ ಹುಡಿಗೆ, ಒಂದು ಹಾಸ್ಯದ ಪದ್ಯವನ್ನು ತಲೆಯಲ್ಲಾಡಿಸುತ್ತ

ಹಾಡಿ ಎಲ್ಲರನ್ನೂ ನಗಿಸಿದಳು. ಅವಳ ರೂಪ, ಮತ್ತು ದೊಡ್ಡ ಸೊಸೆಯು ಹತ್ತಿರ ನಿಂತುಕೊಂಡೇ ಆಡುತ್ತಿದ್ದ ಮಾತುಕತೆಗಳಿಂದ ಆ ಬಾಲೆ ದೊಡ್ಡ ಸೊಸೆಯು ಮಗಳೆಂದು ಅಪೂ ಊಹಿಸಿದ.

ಅಪೂ ಆಗ "ನಮ್ಮಮ್ಮ ಈ ಸಮಯದಲ್ಲಿ ಒಂದು ಸಲ ಮೇಲೆ ಬಂದು ನೋಡುವುದಕ್ಕೇನು ? ಎಲ್ಲಿದ್ದಾಳೊ ? ಯಾವ ಕತ್ತಲ ಅಡಿಗೆ ಮನೆ ಯೊಳಗೊ ? ಇವನ್ನೆಲ್ಲ ನಮ್ಮಮ್ಮ ಮತ್ತೆ ಯಾವಾಗ ನೋಡುವುದು ?" ಎಂದು ಆಸೆಪಟ್ಟನು.

ಆದರೆ ಸರ್ವಜಯಾಳಿಗೆ ಇಂದು ಬೆಳಿಗ್ಗೆಯಿಂದ ಎಳ್ಳಷ್ಟೂ ಪುರು ಸೊತ್ತಿಲ್ಲ. ಸುಮಾರು ಎರಡು ಮಣ ಮೀನನ್ನು ತುಪ್ಪದಲ್ಲಿ ಕರಿಯುವ ಭಾರ ಅವಳೊಬ್ಬಳ ಮೇಲೆಯೇ ಬಿದ್ದಿತ್ತು.

ಕೆಲವು ದಿನಗಳ ನಂತರ ಅಪೂ ಕೆಳಗಿನ ವರಾಂಡಾದಿಂದ ಹೊರಬೀದಿಗೆ ಹೋಗುತ್ತಿದ್ದಾಗ, ದೊಡ್ಡ ಸೊಸೆಯು ಮಗಳು ಲೀಲಾಳನ್ನು ನೋಡಿದ. ಅವಳೂ ಇವನನ್ನು ಕಂಡು "ಸ್ವಲ್ಪ, ನಿಲ್ಲೋ. ನಿನ್ನ ಹೆಸರೇನು ಅಪೂ ಅಲ್ವಾ?" ಎಂದಳು. ಅವನು "ಅಪೂ ಅಂತ ನಮ್ಮಮ್ಮ ಕರೆಯುವುದು. ನನ್ನ ಸರಿಯಾದ ಹೆಸರು ಅಪೂರ್ವಚಂದ್ರ ರಾಯ್" ಎಂದ.

ಇಷ್ಟರ ತನಕ ಆ ಮನೆಯ ಯಾವ ಹುಡುಗರೂ ಇವನನ್ನು ಮಾತ ನಾಡಿಸಿದುದಿಲ್ಲ. ಲೀಲಾ ಹತ್ತಿರ ಬಂದು ನಿಂತಳು. ಎಷ್ಟು ಸುಂದರವಾದ ಮುಖ ! ದೊಡ್ಡ ಸೊಸೆಯ ಸಮಾನವಿರುವ ಯಾವ ಸುಂದರ ಸ್ತ್ರೀಯ ಕಲ್ಪನೆಯೂ ಅವನಿಗೆ ಬರುವುದಿಲ್ಲ. ಅವಳ ಮಗಳು ಈಕೆ.

"ನೀನು ನಮ್ಮ ಮನೆಗೆ ಬಂದು ಎಷ್ಟು ದಿನಗಳಾಯಿತು ? ನೀವು ಬಂದದ್ದು ನಾವು ನೋಡಲೇ ಇಲ್ಲ." ಎಂದಳು.

"ನಾವು ಫಾಲ್ಗುಣ ಮಾಸದಲ್ಲಿ ಬಂದೆವು, ಕಾಶಿಯಿಂದ. ನಮ್ಮಪ್ಪ ಅಲ್ಲಿ ಸತ್ತು ಹೋದರಲ್ಲ ? ಅದಕ್ಕೆ."

"ನಡಿ, ನನ್ನ ಓದುವ ರೂಮಿಗೆ ಹೋಗಿ ಕೂಡೋಣ" ಎಂದಳು ಲೀಲಾ.

"ನಾನು ಬರಬೇಕಾ ?" ಸಂಕೋಚದಿಂದ ಕೇಳಿದ ಅಪೂ.

"ಹೌದು ಕಣೋ. ನಾನು ಹೇಳುತ್ತಿರುವುದು ಅದನ್ನೇ—ನಿನಗೆಲ್ಲೋ ವಿಪರೀತ ನಾಚಿಕೆ."

ಅವಳ ಓದುವ ಕೋಣೆ ಅಷ್ಟು ದೊಡ್ಡದಲ್ಲದಿದ್ದರೂ ಒಳ್ಳೇ ಸುಸಜ್ಜಿತ ವಾಗಿದ್ದಿತು. ಅಪೂ ಬೆರಗಾಗಿ ಹೋದ. ಲೀಲಾ, ಒಂದು ಚಂದದ ಚರ್ಮದ ಚೀಲದಿಂದ ಕೆಲವು ಚಿತ್ರಗಳನ್ನು ತೆಗೆದು, "ನೋಡು, ಈ ಬಣ್ಣದ ಚಿತ್ರಗಳು. ಮಾಸ್ಟರು ಹೇಳಿದ್ದಾರೆ, ಭಾಗಾಕಾರ ಚೆನ್ನಾಗಿ ಕಲಿತರೆ ಇನ್ನೂ ತೆಗೆದುಕೊಡು ತ್ತಾರಂತೆ ನಿನಗೆ ಭಾಗಾಕಾರ ಬರುತ್ತಾ ?"

"ಹೋ ! ಪೋಕಾಗಿ" ಎಂದು ಅಪೂ ಹೇಳುವಾಗ ಆ ಭಂಗಿಯಲ್ಲಿ ಅತ್ಯಂತ ಸುಂದರನಂತೆ ಕಂಡುಬಂದ ಆ ಹುಡಿಗೆಯ ಕಣ್ಣಿಗೆ. ಲೀಲಾ ನಗುತ್ತ ಅವನ ತುಟಿಗಳ ಕೆಳಗೆ ಬೆರಳಿಟ್ಟು "ಇದೇನೋ ನಿನ್ನ ತುಟಿ ಕೆಳಗ, ಮಚ್ಚೆ ! ಈ ಮಚ್ಚೆ ನಿನ್ನ ಮುಖಕ್ಕೆ ಒಪ್ಪುತ್ತೆ" ಎಂದಳು.

ಅಪೂ "ನೀನು ಅವತ್ತು ಪದ್ಯ ಹೇಳಿದೆಯಲ್ಲಾ ಬಹು ಚೆನ್ನಾಗಿತ್ತು" ಎಂದ.

"ನಿನಗೆ ಪದ್ಯ ಬರುತ್ತಾ ?"

"ಬರುತ್ತೆ. ನಮ್ಮ ಅಪ್ಪನದೊಂದು ಪದ್ಯ ಪುಸ್ತಕವಿದೆ, ಅದರಿಂದ ಕಲಿತುಕೊಂಡೆ. ನನಗೆ ಎಷ್ಟೋ ಪದ್ಯ ಬರುತ್ತವೆ."

"ಒಂದು ಹೇಳು ನೋಡೋಣ."

ಅಪೂ ತಲೆದೂಗುತ್ತಾ ಈ ಪದ್ಯ ಹೇಳಿದ :

ಈಚಲು ಚಾಪೆ ಹಾಸಲು ಹುಲ್ಲು,
ಮಲಗಿ ಮೈಮುರೆತು ಬಂಟ—
ಮಂಚದ ಲೇಪು, ಸೊಳ್ಳೆಯು ಪರದೆ,
ಮಲಗಿ ಮುರಿಯಿತೆ ಸೊಂಟ ?...

ಲೀಲಾ ಪದ್ಯ ಕೇಳಿ ಗಟ್ಟಿಯಾಗಿ ನಗುತ್ತಾ "ಭೇಷ್, ಚೆನ್ನಾಗಿದೆ. ನಿಲ್ಲು, ನಿಲ್ಲು ಇದನ್ನು ಬರೆಕೊಳ್ತೇನೆ" ಎಂದು ಕಾಗದವನ್ನೂ ಲೇಖನಿಯನ್ನೂ ಸಜ್ಜು

ಮಾಡಿಕೊಂಡಳು. ಅಪೂ ಮತ್ತೆ ಪದ್ಯ ಹೇಳುತ್ತ ಹೋದಂತೆ ಲೀಲಾ ಬರೆಯುತ್ತ ಹೋದಳು. ಆಗ ಅಪೂ ಆಶ್ಚರ್ಯದಿಂದ,

"ಮಸಿಯೇ ಇಲ್ಲವಲ್ಲ. ಹೇಗೆ ಬರೆಯುತ್ತೀಯೋ ?" ಎಂದು ಕೇಳಿದ.

"ಇದು ಫೌಂಟನ್ ಪೆನ್ ಕಣೋ. ಮಸಿ ಇದರೊಳಗೆ ತುಂಬಿದೆ."

"ಭಲೇ ಭೇಷ್. ಎಷ್ಟು ಮಜಾ ! ನೋಡೋಣ ಒಂದು ಸಲ ಬರೆದು."

ಲೀಲಾ ಅವನ ಕೈಯಲ್ಲಿ ಪೆನ್ನು ಕೊಟ್ಟು, ಅವನು ಬರೆಯುವದನ್ನು ನೋಡುತ್ತಿದ್ದಳು. ಮತ್ತು "ನಿನಗೆ ಕೊಟ್ಟುಬಿಟ್ಟೆ ಈ ಪೆನ್ನು. ನೀನೇ ಇಟ್ಟುಕೋ."

ಅಪೂ ಅವಾಕ್ಕಾಗಿ ಅವಳೆಡೆಗೆ ನೋಡಿದ. ಆಮೇಲೆ ನಾಚಿಕೆಯ ಮುಖದಿಂದ "ಬೇಡಮ್ಮ ನನಗೆ" ಎಂದ. "ಯಾಕೋ ?" ಎಂದು ಕೇಳುತ್ತ ಅವಳು ಎಷ್ಟು ಬಲವಂತ ಮಾಡಿದರೂ ಅವನು ಒಪ್ಪಲಿಲ್ಲ. "ಯಾರಾದರೂ ಬೈದರೆ" ಎಂದು ಅವನ ಬಾಯಿಂದ ಮಾತು ಹೊರಟಿತು.

"ಯಾಕೆ ಯಾರು ಬೈಯ್ಯಬೇಕು ? ನಾನೇ ಅಮ್ಮನಿಗೆ ಹೇಳುತ್ತೇನೆ. ನಿನಗೆ ಪೆನ್ ಕೊಟ್ಟೆ ಅಂತ. ಅಪ್ಪನ ಹತ್ತಿರ ಇನ್ನೊಂದು ಕೇಳಿ ತಗೋತೇನೆ. ಎಲ್ಲಿ, ನಿನ್ನ ಕೈ ಚಾಚು. ಇನ್ನು ತಿರುಗಿ ಕೊಡಕೂಡದು" ಎಂದಳು.

ಅವಳ ಹತ್ತಿರ ಹಲವಾರು ಪುಸ್ತಕಗಳಿದ್ದವು. ಅಪೂ ಒಂದನ್ನು ತಿರುವಿ ಹಾಕುತ್ತ "ಪುಸ್ತಕ ಓದುವುದಕ್ಕೆ ಕೊಡುತಿಯಾ ? ಒಂದೇ ಒಂದು ಸಲ" ಎಂದು ಕೇಳಿದ.

"ಹೋ. ತಗೊಂಡು ಹೋಗು. ನನ್ನ ಹತ್ತಿರ ಚಿತ್ರದ ಪುಸ್ತಕಗಳು, ರಟ್ಟುಹಾಕಿದ ಮೂರು ವರ್ಷದ 'ಮುಕುಲ್' ಪತ್ರಿಕೆಯೂ ಇದೆ."

"ನನ್ನ ಹತ್ತಿರವೂ ಪುಸ್ತಕಗಳಿವೆ. ತರಲಾ ?"

"ನಡೀ ಹಾಗಾದರೆ, ನಿನ್ನ ರೂಮಿಗೆ ನಾನೇ ಬರುತ್ತೇನೆ."

ಆದರೆ ಅವಳನ್ನು ಕರೆದುಕೊಂಡು ಹೋಗಲು ಅಪೂ ಹಿಂಜರಿದ. ಅಲ್ಲಿ ಕೂಡುವುದಕ್ಕೆ ಕುರ್ಚಿ, ಮೇಜು ಒಂದೂ ಇಲ್ಲ. ಚಾಪೆ ಕೂಡ ಇಲ್ಲ, ಆದರೂ

ಲೀಲಾ ಬಂದೇಬಿಟ್ಟಳು. ಅಪೂ ತನ್ನ ಮುರುಕಲು ಟಿನ್ನಿನ ಪೆಟ್ಟಿಗೆಯಿಂದ, ಒಂದು ಪುಸ್ತಕವನ್ನು ಹೊರತೆಗೆದು. ಗರ್ವದ ಸ್ವರದಲ್ಲಿ "ನೋಡು, ನಾನು ಬರೆದಿರುವ ಕಥೆ ಪ್ರಿಂಟಾಗಿದೆ ನನ್ನ ಹೆಸರು ನೋಡು, ಪ್ರಿಂಟಕ್ಷರದಲ್ಲಿ—ಶ್ರೀ ಅಪೂರ್ವಕುಮಾರ ರಾಯ್" ಎಂದು ನುಡಿದ.

ಅದು ಕಾಶಿಯಲ್ಲಿ ಅವನು ಓದುತ್ತಿದ್ದ ಸ್ಕೂಲಿನ ಪತ್ರಿಕೆ ! ಹರಿಹರನು ತೀರಿಹೋಗಿ ೩–೪ ದಿನಗಳ ನಂತರ ಹೊರಬಂದಿತ್ತು.

ಲೀಲಾ ಆತುರದಿಂದ ಓದತೊಡಗಿದಳು. ಅಪೂ ಲೀಲಾಳ ಓದುತ್ತಿದ್ದ ದೃಷ್ಟಿಯನ್ನು ಅನುಸರಣ ಮಾಡುತ್ತ, ತಾನೂ ಮನಸಿನಲ್ಲಿಯೆ ಓದಿಕೊಳ್ಳುತ್ತಾ ಬಂದ. ಕಥೆ ಓದಿ ಮುಗಿಸಿ ಪ್ರಶಂಸೆ ತುಂಬಿದ ಕಣ್ಣುಗಳಿಂದ "ತಡಿ, ಹೋಗಿ ಇದನ್ನು ನಮ್ಮಮ್ಮನಿಗೆ ತೋರಿಸುತ್ತೇನೆ. ಅಲ್ಲವೊ, ಇಲ್ಲಿ ನಿಶ್ಚಿಂದಿಪುರ ಅಂತ ಬರೆದಿದೆಯಲ್ಲ. ನಿಶ್ಚಿಂದಿಪುರ ಎಲ್ಲಿದೆ ?" ಎಂದಳು.

"ನಿಶ್ಚಿಂದಿಪುರ ನಮ್ಮ ಊರು, ಅಲ್ಲೇ ನಮ್ಮ ಮನೆ ಇದ್ದದ್ದು. ಕಾಶಿಗೆ ನಾವು ಬಂದು ಒಟ್ಟು ಎರಡು ವರ್ಷ ಆಗತಾ ಬಂತು."

[೭]

ತಾಯಿಯನ್ನು ಬಲವಂತಮಾಡಿ ಒಪ್ಪಿಸಿ, ಅಪೂ ಶಾಲೆಗೆ ಸೇರಿದ. ಜ್ಯೇಷ್ಠಮಾಸದ ಎರಡನೆ ವಾರದಲ್ಲಿ ಸರ್ವಜಯಾ ಯೋಚನೆ ಮಾಡಿ ಹೇಗೋ ಒಂದು ರೀತಿಯಲ್ಲಿ ಅಪೂಗೆ ಉಪನಯನ ಮಾಡಿಸಲು ವ್ಯವಸ್ಥೆ ಮಾಡಿದಳು. ಪರಸ್ಥಳ, ಪರರ ಮನೆ. ದೇವರ ಮನೆಯ ಅಂಗಳದಲ್ಲಿ. ಹೆದರುತ್ತಲೇ–ಪುರೋಹಿತನೊಬ್ಬನನ್ನು ಕರೆಸಿ ಕರ್ಮ ಮುಗಿಸಿದ್ದಾಯಿತು. ಇಬ್ಬರು ಮೂವರು ಅಡಿಗೆಯ ಬ್ರಾಹ್ಮಣರು ಊಟಕ್ಕೆಂದು ಬಂದಿದ್ದರು.

ಉಪನಯನ ಕಾಲದಲ್ಲಿ ಲೀಲಾ ಊರಲ್ಲಿರಲಿಲ್ಲ. ಅವಳ ತಂದೆಗೆ ಮೈಸರಿ ಇಲ್ಲದ್ದರಿಂದ ಅವರೆಲ್ಲ ಕಲಕತ್ತೆಗೆ ಹೋಗಿದ್ದರು.

ಉಪನಯನವಾದ ಕೆಲ ದಿನಗಳ ನಂತರ ಅಪೂ ತನ್ನ ಕೋಣೆಯಲ್ಲಿ ಕುಳಿತು, ಲೀಲಾ ಕೊಟ್ಟು ಹೋಗಿದ್ದ ಮುಕುಲ್ ಪತ್ರಿಕೆಯ ಹಾಳೆಗಳನ್ನು ತಿರುವಿ ಹಾಕುತ್ತಿದ್ದ. ಆಗ ಬಾಗಿಲಲ್ಲಿ ಯಾರೊ ನಿಂತ ಹಾಗೆ ಕಾಣಿಸಿತು.

ಅಪೂ ಪುಸ್ತಕವನ್ನು ಮುಚ್ಚಿ ನೋಡುತ್ತಾನೆ. ಲೀಲಾ ಕೌತುಕ ಮತ್ತು ನಗು ತುಂಬಿದ ಕಣ್ಣುಗಳಿಂದ ನೋಡುತ್ತ ನಿಂತಿದ್ದಳು. ಅಪೂ ಮೇಲಕ್ಕೆದ್ದವನೆ, "ಭೇಷ್, ಒಳ್ಳೇ ದೊಡ್ಡ ಮನುಷ್ಯಳು ನೀನು. ಸೋಮವಾರವೇ ಕಲಕತ್ತೆ ಯಿಂದ ಬರುತ್ತೇನೆಂದು ಹೇಳಿ ಹೋದೆ. ಅದಾಗಿ ಎಷ್ಟು ಸೋಮವಾರ ಗಳಾದವೊ ?'

"ಏನು ಮಾಡಲಿ? ನನ್ನನ್ನು ಕಲ್ಕತ್ತೆಯಲ್ಲೇ ಸ್ಕೂಲಿಗೆ ಸೇರಿಸಿದ್ದಾರೆ. ಅಪ್ಪನ ಆರೋಗ್ಯ ಸರಿ ಹೊಂದಿದರೆ ಮತ್ತೆ ಬರತೇವೆ" ಎಂದಳು.

ಅಪೂವಿನ ಮುಖದಲ್ಲಿ ಇದುವರೆಗಿದ್ದ ಸಂತೋಷವು ಹಾಗೆಯೇ ಇಂಗಿ ಹೋಯಿತು. "ಇರುವುದಿಲ್ಲವಾ ನೀವೆಲ್ಲಾ ಇಲ್ಲಿ ?" ಎಂದ,

ಲೀಲಾ "ಸ್ವಲ್ಪ ಕಣ್ಣು ಮುಚ್ಚಿಕೋ" ಎಂದಳು.

ಅವಳ ಬಲವಂತಕ್ಕೆ ಕಣ್ಣು ಮುಚ್ಚಿದಾಗ ಕೂಡಲೇ ಕೈಯಲ್ಲಿ ಏನೊ ಭಾರವಾದ ಸಾಮಾನಿನ ಸ್ಪರ್ಶವನ್ನು ಅನುಭವ ಮಾಡಿದ. ಅವನು ಕಣ್ಣು ತೆರೆದ ತಕ್ಷಣ ಲೀಲಾ ಖಿಲ್ಲೆಂದು ನಕ್ಕಳು. ಅವಳು ತಂದಿದ್ದ ರಟ್ಟಿನ ಪೆಟ್ಟಿಗೆ ಯಲ್ಲಿ ಬೆಳ್ಳಗೆ ನವುರಾಗಿದ್ದ ಧೋತರ, ಒಂದು ವಸ್ತ್ರ ಮತ್ತು ಬಣ್ಣದ ರೇಶಿಮೆಯ ಒಂದು ಜುಬ್ಬಾ ಇದ್ದಿತು.

"ಅಮ್ಮ ತೆಗೆದುಕೊಟ್ಟಳು. ಹೇಗಿದೆ? ನಿನ್ನ ಮುಂಜಿಗೆ ಉಡುಗೊರೆ ಇದು" ಅಪೂ ಈ ಮುಂಚೆ ಧರಿಸುವುದಂತಿರಲಿ, ಈ ಮನೆಗೆ ಕಾಲಿಡುವ ಮೊದಲು ಅಂಥವನ್ನು ಕಣ್ಣಲ್ಲಿ ಕೂಡ ನೋಡಿರಲಿಲ್ಲ.

ಲೀಲಾ "ಒಂದು ತಿಂಗಳಲ್ಲಿ ನಿನ್ನ ಮುಖವೇ ಬದಲಾಯಿಸಿ ಹೋಗಿದೆ ಯಲ್ಲೋ ? ದೊಡ್ಡವನಾಗಿ ಕಾಣುತ್ತೀ. ಎಲ್ಲಿ ನಿನ್ನ ಹೊಸ ಜನಿವಾರ ? ಆ ಮೇಲೆ ಕಿವಿಗೆ ಸಿಕ್ಕಿಸಿಕೊಳ್ಳಬಹುದು ಅಲ್ಲವಾ?"

ಅಪೂ ಮುಕುಲ್ ಪತ್ರಿಕೆಯ ಒಂದು ಸಂಪುಟದಲ್ಲಿಯ ಕಥೆಯನ್ನು ತೋರಿಸುತ್ತ "ಓದಿದ್ದೀಯಾ ಇದನ್ನು ?" ಎಂದು ಕೇಳಿದ. ಲೀಲಾ ಇಲ್ಲ ವೆಂದಾಗ ಅಪೂ ಓದಿ ಹೇಳಿದ. ಸಮುದ್ರತಳದಲ್ಲಿ ಯಾವುದೋ ಒಂದು ಸ್ಥಳದಲ್ಲಿ ಸ್ಪೇನ್ ದೇಶದ, ಧನಕನಕಗಳಿಂದ ಕೂಡಿದ ಒಂದು ಹಡಗು

೨೦೦–೩೦೦ ವರ್ಷಗಳ ಹಿಂದೆ ಮುಳುಗಿಹೋಗಿತ್ತಂತೆ. ಇಂದಿನವರೆಗೆ ಅನೇಕ ಪರಿಶೋಧನೆಗಳಾದರೂ, ಆ ಸ್ಥಳವನ್ನು ಕಂಡು ಹಿಡಿಯಲಾಗಿದ್ದಿಲ್ಲ.

“ಯಾರೂ ಅದನ್ನು ಹೊರಗೆ ತೆಗೆದಿಲ್ಲ! ಎಷ್ಟು ದುಡ್ಡಿದೆ ಗೊತ್ತಾ, ಅದರಲ್ಲಿ? ಲಕ್ಷ, ಐವತ್ತು ಲಕ್ಷ ಪೌಂಡುಗಳಷ್ಟು ಚಿನ್ನ, ಬೆಳ್ಳಿ! ಒಂದು ಪೌಂಡಿಗೆ ಹದಿಮೂರು ರೂಪಾಯಿ, ಲೆಕ್ಕ ಮಾಡು ನೋಡೋಣ.”

ಈ ಮುನ್ನವೆ ಅವನು ಅದರ ಲೆಕ್ಕ ಮಾಡಿಯೇ ಇಟ್ಟಿದ್ದ. ಮುಂದುವರಿಸುತ್ತ “ನಾನು ದೊಡ್ಡವನಾದ ಮೇಲೆ ಅಲ್ಲಿ ಹೋಗಿ ಹುಡುಕುತ್ತೇನೆ. ಖಂಡಿತ ಹೊರಗೆ ತೆಗೆಯುತ್ತೇನೆ, ನೋಡುತ್ತಿರು” ಎಂದು ಹೇಳಿದ ಅಪೂ. ಅವನ ಮಾತಿನಲ್ಲಿ, ಇದುವರೆಗೆ ಯಾರೂ ಕಂಡುಹಿಡಿಯದಿದ್ದುದು ಒಳ್ಳೆಯದೇ ಆಯಿತು ಎಂಬ ಭಾವವಿತ್ತು.

ಲೀಲಾ ಕೇಳಿದಳು “ನೀನು, ಹುಡುಕುತ್ತೀಯಾ? ಅದಕ್ಕಾಗಿ ನಿನಗೆ ಅಲಾಯಿದಿಯಾಗಿ ಒಂದು ಜಹಜು ಸಿಗಬೇಕಾಗುತ್ತೆ, ಗೊತ್ತಾ?”

“ಅದು ಸಿಕ್ಕತ್ತೆ. ಕೊಂಡುಕೊಂಡು ಬಿಡುತ್ತೇನೆ. ದೊಡ್ಡವನಾದ ಮೇಲೆ ನನ್ನ ಹತ್ತಿರ ದುಡ್ಡು ಇರುವುದಿಲ್ಲವೇನೂ?” ಅವನ ಮಾತಿನಲ್ಲಿ ಲೀಲಾಳಿಗೆ ನಂಬಿಕೆಯುಂಟಾದಂತೆ ತೋರಿತು.

ಲೀಲಾ ಕಲಕತ್ತೆಗೆ ಹಿಂತಿರುಗಿ ಕೆಲವು ತಿಂಗಳುಗಳಾಗಿರಬಹುದು. ಅಪೂ ಮನೆಯ ಹೆಬ್ಬಾಗಿಲ ಬಳಿ ನಿಂತಿದ್ದಾಗ ಆ ಮನೆಯ ಹುಡುಗರು ಕುರ್ಚಿ ಗಾಡಿಯೊಂದನ್ನು ಎಳೆಯುತ್ತ ಆಟವಾಡುತ್ತಿದ್ದರು. ಆ ಹುಡುಗರಲ್ಲಿ ಒಬ್ಬ, ರಮೇನ್ ಅವನ ಹೆಸರು, ಅಪೂವನ್ನು ಕೂಗಿ “ಏಯ್, ಬಂದು ಎಳೆಯೋ ನಮ್ಮನ್ನ ಒಂದು ಸಲ” ಎಂದ. ಆ ಗಾಡಿ ಮನೆಗೆ ಬಂದ ಲಾಗಾಯಿತು ಅಪೂ ಅದರ ಮೇಲೆ ಆಸೆಯಿಟ್ಟಿದ್ದ. ಅಂತೆಯೇ “ಆಗಲಿ, ಎಳೆಯುತ್ತೇನೆ. ನನ್ನನ್ನೂ ಒಂದು ಸಲ ಅದರ ಮೇಲೆ ಕೂತುಕೊಳ್ಳೋಕೆ ಬಿಡಬೇಕು” ಎಂದ.

ಅಪೂ ಉತ್ಸಾಹದಿಂದ ಅದನ್ನು ಅಲ್ಲಿ ಇಲ್ಲಿ ಎಳೆದಾಡಿದ. ಸ್ವಲ್ಪ ಹೊತ್ತು ಹೀಗೆ ಆಡಿದ ಮೇಲೆ, ರಮೇನ್ “ಸರಿ, ಇವತ್ತು ಆಟ ಸಾಕು” ಎಂದು ಹೇಳಿ, ಗಾಡಿಯನ್ನು ಮನೆಯೊಳಕ್ಕೆ ಕೊಂಡೊಯ್ದನು. ಆಗ ಅಪೂ “ನಾನು ಸ್ವಲ್ಪ ಹತ್ತಕೂಡದಾ?” ಎಂದ.

"ಇವತ್ತು ಇನ್ನು ಹತ್ತುವುದು ಆಗುವುದಿಲ್ಲ. ಹೆಚ್ಚು ಹತ್ತಿದರೆ ಮುರಿದು ಹೋಗುತ್ತದೆ. ಇರಲಿ ನಡಿ" ಎಂದು ಅಲಕ್ಷ್ಯದಿಂದ ಮುಂದಡಿ ಯಿಟ್ಟನು. ಕೋಪದಿಂದ, ನಿರಾಶೆಯಿಂದ ಅಪೂ ಕಣ್ಣಲ್ಲಿ ನೀರು ಬಂತು. ಇಷ್ಟು ಹೊತ್ತೂ, ಅವನು ಇವರೆಲ್ಲರನ್ನೂ ಒಬ್ಬೊಬ್ಬರನ್ನಾಗಿ ಕೂಡಿಸಿ ಗಾಡಿ ಎಳೆದಿದ್ದ. ಅಪೂ, ರಮೇನ್‌ರಲ್ಲಿ ವಾದ ಬೆಳೆಯಿತು.

"ವಾವಾ ! ನೀನೇ ಹೇಳಿದೆಯಲ್ಲ, ನನ್ನನ್ನೂ ಅದರ ಮೇಲೆ ಹತ್ತಿ ಸುತ್ತೀನಿ ಅಂತ. ಭಲೆಭಲೆ, ಅವತ್ತೂ ಹೀಗೇ ಹತ್ತಗೊಡಿಸಲಿಲ್ಲ, ಕಡೆಯಲ್ಲಿ !"

"ಯಾಕೊ ಎಳೆದೆ ಹಾಗಾದರೆ ? ನಾನು ಹೇಳಲಿಲ್ಲ ನಿನ್ನನ್ನು ಹತ್ತಿ ಸುತ್ತೀನೆ ಅಂತ. ಇದು ಪುಕ್ಕಟೆ ಗಾಡಿ ಅಂತ ತಿಳಿದೀಯೇನೊ ?"

"ನೀನೇ ಹೇಳಿ, ಈಗ ಇಲ್ಲ ಅನ್ನುತೀಯಾ. ಎಳೆದೂ ಎಳೆದೂ ನನ್ನ ಕೈಯೆಲ್ಲ ನೋಯುತ್ತಿದೆ. ಅಷ್ಟಾದರೂ ನಾನು ಒಂದು ಸಲವೂ ಹತ್ತ ಬಾರದೇನೊ ?"

ಉಳಿದ ಹುಡುಗರೆಲ್ಲ ಅವನ ಮಾತಿಗೆ ನಕ್ಕರಲ್ಲದೆ ಬೇರೇನೂ ಆಗಲಿಲ್ಲ. ಅಷ್ಟರಲ್ಲಿ ದೊಡ್ಡ ಯಜಮಾನರ ಕೊನೆಯ ಮಗ ಟೇಬೂ ಬಂದು, ಅಪೂನ ಕುತ್ತಿಗೆಗೆ ಕೈಹಾಕಿ "ಏಯ್, ಜೋರು ಮಾಡುತ್ತೀಯೇನೊ. ನಮ್ಮ ಖುಷಿ. ನಾವು ಹತ್ತೋದಕ್ಕೆ ಬಿಡೋದಿಲ್ಲ. ಏನು ಮಾಡುವ ಹಾಗಿದ್ದೀ?" ಎಂದ.

ಟೇಬೂ ಅಪೂವಿಗಿಂತಲೂ ವಯಸ್ಸಿನಲ್ಲಿ ಚಿಕ್ಕವನು. ಅವನು ಮಾಡಿದ ಅವಮಾನದಿಂದಲೂ ಇತರರ ಅಣಕದ ನಗೆಯಿಂದಲೂ ಅಪೂ ತಲೆ ಕೆಟ್ಟು ಹೋಯಿತು. ಆಗ ಅವನು ತಟಕ್ಕನೆ ತನ್ನ ಕತ್ತನ್ನು ಟೇಬೂವಿನ ಹಿಡಿತದಿಂದ ಬಿಡಿಸಿಕೊಂಡವನೇ, ಟೇಬೂಗೆ ಜೋರಾಗಿ ಒಂದೇಟು ಬಿಟ್ಟನು. ತಕ್ಷಣ ಆ ಹುಡುಗ ಏಟಿನ ಜೋರಿಗೆ ಗಿರ್ರೆಂದು ಬಿದ್ದುಬಿಟ್ಟ. ಗೋಡೆಗೆ ತಾಗಿ ಅವನ ಹಣೆಯಿಂದ ರಕ್ತವೂ ಬಂದಿತು. ಟೇಬೂ ವಿಕಟವಾಗಿ ಚೀತ್ಕಾರ ಮಾಡುತ್ತಾ ಅಳುವುದಕ್ಕೆ ತೊಡಗಿದ.

ಒಳಗಿದ್ದ ಆಳು ಜನ ಓಡಿ ಬಂದರು. ಬೆಳಗಿನ ಹೊತ್ತು, ಮೇಲುಗಡೆ ಬೈಠಕು ಖಾನೆಯಲ್ಲಿ ದೊಡ್ಡ ಯಜಮಾನರು ಕಛೇರಿ ನಡೆಸುತ್ತಿದ್ದರು.

ಪರಿವಾರ ಸಮೇತ ಕೆಳಗೆ ಬಂದರು. ಹಲವು ತಂಬಿಗೆ ನೀರು, ಬೀಸಣಿಗೆ, ಗಾಯಕ್ಕೆ ಕಟ್ಟಲು ಬ್ಯಾಂಡೇಜ್— ಯಾರ್ಯಾರೋ ತಂದರು.

ಗಲಾಟೆ ಸ್ವಲ್ಪ ಕಡಿಮೆಯಾಗುತ್ತಲೂ ದೊಡ್ಡ ಯಜಮಾನರು "ಯಾರು ? ಯಾರು ? ಯಾರು ಹೊಡೆದದ್ದು ಇವನಿಗೆ" ಎಂದು ದೊಡ್ಡ ದನಿಯಲ್ಲಿ ಕೇಳಿದರು.

ದರವಾನ ರಾಮ ನಿಹೋರಾ ಸಿಂಗ್ ಅಪೂವನ್ನು ಎಳೆದು ತಂದು ಯಜಮಾನರ ಎದುರು ನಿಲ್ಲಿಸಿದನು. ಈತ ಆ ಕಾಶಿಯಿಂದ ಬಂದ ಅಡಿಗೆ ಯವಳ ಮಗನಲ್ಲವೆ ? "ಏಯ್, ಬಾರೋ ಈ ಕಡೆ. ಟೇಬೂಗೆ ಹೊಡೆ ದದ್ದು ಯಾಕೋ ?" ಎಂದನು.

ಕೋಪದ ಆವೇಶದಲ್ಲಿ ಅಪೂ ಏಟೇನೊ ಕೊಟ್ಟಿದ್ದ. ಆದರೆ ಇಷ್ಟು ಗಲಾಟೆಯನ್ನು ನಿರೀಕ್ಷಿಸಿರಲಿಲ್ಲ. ಅವನು ಒಳಗೆ ಹುದುಗಿಕೊಂಡಿದ್ದ ನಾಲಿಗೆ ಯನ್ನು ಅತಿ ಕಷ್ಟದಿಂದ ಉಚ್ಚಾರ ಮಾಡುತ್ತ 'ಟೇಬೂನೇ ನನಗೆ ಮೊದಲು... ನನಗೆ ಅವನೇ—' ಎಂದ. ದೊಡ್ಡ ಯಜಮಾನನು 'ಟೇಬೂ ವಯಸ್ಸೆಷ್ಟು, ನಿನ್ನ ವಯಸ್ಸೆಷ್ಟು ಗೊತ್ತೇನೊ, ನಿನಗೆ ?'

ಎಲ್ಲವನ್ನೂ ಧೈರ್ಯವಾಗಿ ಹೇಳಲು ಶಕ್ತನಿದ್ದಿದ್ದರೆ ಅಪೂ ಈ ಪ್ರಶ್ನೆಗೆ ಉತ್ತರವಾಗಿ ಟೇಬೂ ವಯಸ್ಸಿನಲ್ಲಿ ಚಿಕ್ಕವನಿದ್ದರೂ ಕಾರ್ಯದಲ್ಲಿ, ತಂತ್ರದಲ್ಲಿ ಅಪೂವಿನ ಮಂತ್ರಜ್ಞ ಕೀರ್ತಿಶೇಷ, ನೀಲಮಣಿ ರಾಯರಿಗಿಂತಲೂ ಬಲಶಾಲಿ ಯೆಂದು ಹೇಳಿಬಿಡಬಹುದಾಗಿತ್ತು. ಅಲ್ಲದೇ ಟೇಬೂ ಮತ್ತು ಇತರ ಹುಡು ಗರು ಅವನನ್ನು ಕಂಡಾಗಲೆಲ್ಲ 'ಏ, ಅಡಿಗೇ ಹುಡುಗಾ' ಎಂದು ಕೂಗು ತ್ತಿದ್ದುದೂ ಹಿಂದುಗಡೆಯಿಂದ ಬಂದು ತಲೆಯ ಮೇಲೆ ಪಟ್ಟೆಂದು ಹೊಡೆದು ಹೋಗುತ್ತಿದ್ದುದೂ ಕಾಲಿಗೆ 'ಟಾಂಗ್' ಕೊಟ್ಟು ಬೀಳಿಸಲು ಪ್ರಯತ್ನ ಮಾಡುವುದೂ ಇವನ್ನೆಲ್ಲ ಹೇಳಬಹುದಿತ್ತು. ಆದರೆ ಅಲ್ಲಿ ನೆರೆದ ಜನಗಳ ಅನುಕಂಪಹೀನ ದೃಷ್ಟಿಯ ಸಮ್ಮುಖದಲ್ಲಿ ಹೇಗೆ ಸಾಧ್ಯ ? ಅದೂ ದೊಡ್ಡ ಯಜಮಾನರ ಗರ್ಜನೆಯ ಎದುರು ?

"ಸ್ಟುಪಿಡ್ ! ಹಲ್ಕಾ ಹುಡುಗ ! ಯಾರು ಹೇಳಿದರು ನಿನಗೆ, ಈ ಕಡೆ ಬಂದು ಈ ಹುಡುಗರ ಜತೆ ಆಡು ಅಂತ. ಹೂಂ. ಮುಂದೆ ಬಾರೊ" ಎಂಬುದಾಗಿ ಕೂಗಿದರು.

ಅವರ ಕೈಯಲ್ಲಿದ್ದ ಬೆತ್ತವು ಅಪೂವಿನ ಬೆನ್ನಮೇಲೆ ಧುತ್ತೆಂದು ಎರಗಿತು. ಅಪೂ ವಿಸ್ಮಯದ ಕಣ್ಣುಗಳಿಂದ ದೊಡ್ಡ ಯಜಮಾನರ ಕಡೆ ಮತ್ತು ಎರಡನೆಯ ಬಾರಿ ಹೊಡೆಯಲುದ್ಯುಕ್ತವಾದ ಬೆತ್ತದ ಛಡಿಯ ಕಡೆ ನೋಡಿದನು. ಅವನ ಜೀವನದಲ್ಲಿ ಇದಕ್ಕೆ ಮೊದಲು ಎಂದೂ ಯಾರ ಕೈಯಿಂದಲೂ ಹೀಗೆ ಏಟು ತಿಂದಿರಲಿಲ್ಲ. ಬೆತ್ತದ ಹೊಡೆತಗಳ 'ಸಪ್‌ಸಪ್' ಶಬ್ದವನ್ನು ಕೇಳಿ, ಟೇಬೂ ತನ್ನ ಹಣೆಯ ಗಾಯವನ್ನು ಮರೆತು, ಅಪೂನ ಕಡೆ ನೋಡುವಂತಾಯಿತು. ಅಡುಗೆಯವಳ ಮಗ ಇನ್ನು ಮುಂದೆ ಪ್ರತಿಷ್ಠೆ ತೋರಿಸುವುದು ಅಸಂಭವ–ಎನ್ನುವ ನಂಬಿಕೆ ಹುಟ್ಟುವ ವರೆಗೆ ಶಿಕ್ಷೆ ಕೊಟ್ಟಿದ್ದರು, ಯಜಮಾನರು.

ಹೊರಗೆ ನಡೆದದ್ದೆಲ್ಲವೂ ಮನೆಯ ಒಳಗಡೆ ಹೋಗಿ ತಲುಪುವುದಿಲ್ಲ. ಅಪೂ ಏಟು ತಿಂದ ವಿಷಯ ಮಾತ್ರ ಸರ್ವಜಯಾಳ ಕಿವಿಗೆ ಬಿತ್ತು. ಇಂತಹದೇನಾದರೂ ಆದರೆ ಅಮ್ಮನ ತನಕ ಬಂದು ಹೇಳುವ ಹುಡುಗನೇ ಅವನು ? ಎಲ್ಲೊ ಹೊರಟುಹೋಗಿದ್ದ. ತನ್ನ ಮಗನ ಮೇಲೆ ಕೈ ಮಾಡಿದರೆ ? ಹಸು, ಪಾಪ ಅವನು. ಏಟು ಎಲ್ಲಿ ಎಷ್ಟುಮಟ್ಟಿಗೆ ಬಿದ್ದಿದೆ ಎಂದು ಹೇಳುವವರು ಯಾರು ಅವಳಿಗೆ ? ಕೋಪದ ಕಟ್ಟೊಡೆದ ಮೇಲೆ ದುಃಖ ಉಕ್ಕಿಬಂತು, ಮೈಯೆಲ್ಲ ನಡುಗತೊಡಗಿತು.

"ದೇವರೇ ನನ್ನಪ್ಪಾ, ಅವನೊಬ್ಬನೇ ನನಗಿರುವ ಆಸ್ತಿ. ಏನು ಶಿಕ್ಷೆ ಬೇಕಾದರೂ ನನಗೆ ಕೊಡಪ್ಪಾ. ಅವನಿಗೆ ಬೇಡವೊ ? ನನ್ನ ಎದೆ ಚೂರಾಗುತ್ತಾ ಇದೆಯೊ ಸ್ವಾಮೀ. ನಾನಿನ್ನು ಸಹಿಸಲಾರೆನೊ ?"

ಮಧ್ಯಾಹ್ನ ಕೆಲಸ ಯಾವಾಗ ಮುಗಿದೀತೋ, ಕೋಣೆಗೆ ಹೋಗಿ ಯಾವಾಗ ಮಗನನ್ನು ಕಂಡೇನೊ ಎಂದು ಹಂಬಲಿಸಿದಳು. ಅವನು ಬಂದೊಡನೆ ಹತ್ತಿರ ಕೂರಿಸಿಕೊಂಡು ಅವನ ತಲೆಗೂದಲನ್ನು ನೇವರಿಸುತ್ತ

ಇವತ್ತು ಬೆಳಿಗ್ಗೆ... ಮನೆ ಯಜಮಾನರು... ನಿನಗೆ ಯಾಕೊ ಹೇಳಿಕಳಿಸಿದ್ದರಂತಲ್ಲಾ ?... "ಏನಾದರೂ ಬೈದರೆ ?" ಎಂದಳು.

"ಇಲ್ಲಮ್ಮ, ಅದೇ ಅವರ ಮನೆಯ ಟೇಬೂ ಇದ್ದಾನಲ್ಲ. ಅವನಿಗೆ ಸ್ವಲ್ಪ ಗಾಯ ಆಗಿತ್ತು. ಅದಕ್ಕೆ ಯಜಮಾನರು ಹೇಳಿಕಳಿಸಿದ್ದರು. ಏನಾಯಿತು ಎಂದು ಕೇಳುವುದಕ್ಕೆ ?"

ಅದು ಸುಳ್ಳೆಂದು ಅವಳು ಬಲ್ಲಳು. ಸ್ವಲ್ಪ ಹೊತ್ತು ಸುಮ್ಮನಿದ್ದು "ಒಂದು ವಿಷಯ ಯೋಚಿಸುತ್ತಿದ್ದೇನೆ. ಇಲ್ಲಿಂದ ಹೊರಟುಹೋಗೋಣವೇ ?" ಎಂದಳು.

ಅವರು ಆಶ್ಚರ್ಯದಿಂದ ಅಮ್ಮನ ಕಡೆ ನೋಡಿದ. "ಎಲ್ಲಿಗಮ್ಮ? ನಿಶ್ಚಿಂದಿಪುರಕ್ಕೆ ? ಹಾಗಾದರೆ ಭಲೆ. ನಡಿ ಹೋಗೋಣ. ನಾನು ಅಲ್ಲಿ ದೇವರ ಕೆಲಸ ಏನಾದರೂ ಮಾಡುತ್ತೇನೆ. ನಮ್ಮ ಸ್ವಂತ ಊರು ಚೆನ್ನಾಗಿರುತ್ತೆ. ಇಲ್ಲಿ ಇನ್ನು ಇರುವುದೇ ಬೇಡ" ಎಂದ.

ಅಲ್ಲಿ ಏನು ಇದೆ ಹೇಳು ನಮಗೆ ? ಒಂದು ಮುರುಕಲು ಮನೆ. ಇದ್ದ ಒಂದೆರಡು ಎಕರೆ ಗದ್ದೆ ಕೂಡಾ ಹೋಯಿತು. ಹೀಗೆ ಹೋದರೆ ಜನ ನಗುತಾರೊ. ಕಾಶಿಗೆ ಮತ್ತೆ ಹೋಗೋಣವೆ?" ಎಂದಳು— ಸರ್ವಜಯಾ. ಯಾವುದೂ ನಿಶ್ಚಿತವಾಗಲಿಲ್ಲ. ಅವರಮ್ಮನದು ಇನ್ನೂ ಊಟವಾಗಿಲ್ಲ, ಸ್ನಾನವಾಗಿಲ್ಲ, ಆಕೆ ಎದ್ದು ಹೋದಳು.

ಅಪೂ ಮಲಗಿಕೊಂಡೇ ಯೋಚಿಸುತ್ತಿದ್ದ– ಯಾವುದೋ ಒಂದು ವಿಷಯ ಅಸ್ಪಷ್ಟವಾಗಿ ಇಷ್ಟು ದಿನಗಳವರೆಗೆ ಅವನ ಮನಸ್ಸಿನಲ್ಲಿ ಹುದುಗಿಕೊಂಡು ಇದ್ದದ್ದು ಇಂದು ಹೊರಬಂದಿದ್ದಿತು. ಅದೇನೆಂದರೆ ಅವನ ಪ್ರೀತಿಯ ಊರು, ವನ ಅವನಿಗಾಗಿಯೇ ನಿರೀಕ್ಷೆ ಮಾಡಿಕೊಂಡಿದೆ ಎಂದು. ಆ ನೆಲವು ಅವನನ್ನು ರಾತ್ರಿ–ಹಗಲೂ ಕರೆಯುತ್ತಿದೆ. ಬಿದಿರು ಮೆಳೆ ಕೂಗುತ್ತದೆ. ಸೋನಾಡಾಂಗಾದ ಮೈದಾನದಲ್ಲಿ ನೇರಿಳೆ ಮರದ ನೆರಳಲ್ಲಿ ಮತ್ತೆ ಓಡಾಟ ಎಂದಿಗೋ. ಆ ಶಿರೀಷ ವೃಕ್ಷದ ಮೇಲೆ ಕೂತು ಹಾಡುವ ಪಕ್ಷಿಯ ಕೂಗು ಕೇಳುವುದು ಅದೆಂದಿಗೊ ?

ಅಂದು ಬೆಳಿಗ್ಗೆ ಅಷ್ಟು ಏಟು ತಿಂದ ಮೇಲೆಯೂ ಅವನ ಕಣ್ಣುಗಳಿಂದ ಒಂದು ತೊಟ್ಟು ನೀರು ಉದುರಲಿಲ್ಲ. ಈಗ ಮಾತ್ರ ಗೋಳಿಟ್ಟು ಅಳುತ್ತಾ ಆರ್ತ ಸ್ವರದಲ್ಲಿ ಮನಸ್ಸಿನಲ್ಲೇ ದೇವರ ಪ್ರಾರ್ಥನೆ ಮಾಡುತ್ತಾ ಇದಾನೆ. “ದೇವರೆ, ನಾನು ನಿಶ್ಚಿಂದಿಪುರಕ್ಕೆ ಹೋಗುವಂತೆ ಮಾಡು. ಅದೊಂದೇ ನಾನು ಕೇಳುವುದು. ನಿನ್ನ ಕಾಲಿಗೆ ಬೀಳುವೆ.”

ಆದರೆ ಅವನ ಪಥದ ದೇವತೆ ಅದನ್ನು ಕೇಳಿಸಿಕೊಂಡನೆ ? ನಗುತ್ತಾ ಹೇಳುತ್ತಾನೆ ಆ ದೇವತೆ “ಮೂರ್ಖ ಹುಡುಗಾ, ನಿನ್ನ ಪಯಣ ಇಲ್ಲಿಗೇ ಮುಗಿಯಿತೆಂದು ತಿಳಿದೆಯಾ ? ನಿನ್ನ ಊರು ಈ ಊರು ದಾಟಿ ಇನ್ನೂ ಮುಂದೆ ದೇಶಾಂತರದ ದಿಕ್ಕಿಗೆ, ಅಪರಿಚಿತ ಸೀಮೆಗೆ ಹೋಗಲಿಕ್ಕಿದೆ. ಆಗ ದಿನ–ರಾತ್ರಿಗಳು ಕಳೆದು, ಮಾಸ–ವರ್ಷಗಳು ಉರುಳಿ, ಜನನ, ಮರಣ, ಮನ್ವಂತರ, ಮಹಾಯುಗಗಳನ್ನೂ ದಾಟಿ ಹೋಗೋಣ ಮುಂದೆ. ನಿನ್ನ ಪಯಣದ ಹಾದಿ ಆಗೂ ಮುಗಿಯುವದಿಲ್ಲ. ತಿಳಿಯಿತೆ ! ಆ ಹಾದಿಯ ವಿಚಿತ್ರ ಆನಂದ ಯಾತ್ರೆಯ ಅದೃಶ್ಯ ತಿಲಕವನ್ನು ನಿನ್ನ ಹಣೆಯಲ್ಲಿ ಹಚ್ಚಿ, ನಿನ್ನನ್ನು ಮನೆ ಬಿಡಿಸಿ, ಕರತಂದಿದ್ದೇನೆ. ನಡಿ, ಮುಂದೆ ಹೋಗೋಣ.”

‘ಕಾದಂ-ಕಥನ’— ಎಂದರೆ ಕಾದಂಬರಿಯೊಂದರ ಡೈಜೆಸ್ಟ್ ಅಥವಾ ಸಾರಾಂಶವಲ್ಲ. ಎಳೆಯರಿಗಾಗಿ ಸುಲಭಗೊಳಿಸಿ ಬರೆದ ಕಥಾನಕವೂ ಅಲ್ಲ. ಬದಲಾಗಿ ‘ಕತೆಯ ಮೆಯ್ಗಿಡಲೀಯದೇ’ ಅದರ ಹೃದ್ಯವಾದ ಸನ್ನಿವೇಶಗಳನ್ನು ಯಥಾವತ್ತಾಗಿ ಕೊಡುವ ಪೂರ್ಣರೂಪಕದ ಕಥಾಂಶವಿದು. ಕಾದಂಬರಿ ಕನ್ನಡದ್ದೇ ಇದ್ದಾಗ, ಕಾದಂಬರಿಕಾರನದೆ ನುಡಿಗಟ್ಟನ್ನು ಉಳಿಸಿಕೊಂಡು ಮೂಲ ಕೃತಿಯ ರಸಾನುಭವವನ್ನು ಪಡೆಯುವುದೂ ಸಾಧ್ಯ.

ಜಗತ್ಪ್ರಸಿದ್ಧವಾದ ಕೆಲವು ಸರ್ವೋತ್ಕೃಷ್ಟ ಕಾದಂಬರಿಗಳನ್ನು ಈ ರೀತಿಯಲ್ಲಿ ಮರುನಿರೂಪಿಸಿದ ಶ್ರೀನಿವಾಸ ಹಾವನೂರರು, ಕನ್ನಡದ ಖ್ಯಾತ ಸಾಹಿತಿಗಳೆಂದು ತಿಳಿದ ವಿಷಯವೇ ಆಗಿದೆ.

ತನಗೊಂದು ಸಂಸ್ಕೃತ ತಾಡವೋಲೆ ಗ್ರಂಥವು ಸಿಕ್ಕಿರುವುದಾಗಿ ಸುಳ್ಳು ಹೇಳಿ ಹಲವಾರು ಅದ್ಭುತ ರಮ್ಯವಾದ, ಆದರೆ ಬುದ್ಧಿವಂತಿಕೆಯಿಂದ ಕೂಡಿದ ಕತೆಗಳನ್ನು ಓರ್ವ ರಚಿಸಿದ. ಅವನೇನು ಭಾರತೀಯನಲ್ಲ. ಪುಣೆಯ ಕಾಲೇಜಿನಲ್ಲಿ ಪ್ರಿನ್ಸಿಪಾಲನಾಗಿದ್ದ ಬ್ರಿಟನ್ನಿಗ – ಬೇನ್. ಈತನ ‘ಸೂರ್ಯಕಾಂತ’ವು ಇಲ್ಲಿ ಹರಳುಗೊಂಡಿದೆ.

ಗಳಗನಾಥರ ಸ್ಫೂರ್ತಿದಾಯಕ ಬರವಣಿಗೆಯುಳ್ಳ ‘ಕುಮುದಿನಿ’ ಕನ್ನಡಿಗರ ಇತಿಹಾಸವೇ ಆಗಿದ್ದು, ಇಲ್ಲಿಯ ‘ಎಚ್ಚಮನಾಯಕ’ ಹಳ್ಳಿಹಳ್ಳಿಗಳಲ್ಲಿಯೂ ಪರಿಚಿತ. ಅದರಲ್ಲಿಯ ‘ಅಂತಕನ ಕೋಲಾಹಲ’ ವೆಂಬ ಭಾಗವನ್ನು ಓದಿ ಒಬ್ಬ ಮೂರ್ಛೆ ಹೋದನಂತೆ ! ಆ ಭಾಗವೂ ಇಲ್ಲಿದೆ.

‘ಬನಗರವಾಡಿ’ ಎಂದರೆ ಮರಾಠಿಯಲ್ಲಿ ಕುರಿಗಳ ಹಳ್ಳಿ. ಆ ಕುಗ್ರಾಮದ ಜನರ ಜೀವನವೂ ಕುರಿಗಳಂತೆಯೇ ಸದ್ದಿಲ್ಲದೆ ಸಾಗಿದ್ದಿತೆ ? ಏನೂ ಇಲ್ಲದ ಪರಿಸರದಿಂದ, ಮನೋಜ್ಞವಾದ ರೀತಿಯಲ್ಲಿ ಕತೆಯೊಂದು ಉದ್ಭವಗೊಂಡದ್ದನ್ನು ‘ಬನಗರವಾಡಿ’ಯಲ್ಲಿ ಕಾಣಬಹುದು.

ಸತ್ಯಜಿತ್ ರೇಯ ಸಿನೆಮದಿಂದಾಗಿ ವಿಶ್ವವಿಖ್ಯಾತವಾದ “ಪಥೇರ್ ಪಾಂಚಾಲಿ”ಯೂ ಇಲ್ಲಿ ಕಥನಗೊಂಡಿದೆ. ಎಂದ ಮೇಲೆ......

ಒಂದು ಬಾರಿ ಓದಿ ಸವಿದು ಕೆಲ ದಿನಗಳ ಅನಂತರ ಮತ್ತೊಮ್ಮೆ ಓದಿದರೂ ಅದೇವಾಚನ ಕುತೂಹಲವನ್ನು ಉಳಿಸಿಕೊಳ್ಳುವ ಈ ಕಾದಂ–ಕಥನಗಳು ‘ಕಸ್ತೂರಿ’ ಯಲ್ಲಿ ಮೊದಲು ಪ್ರಕಟವಾಗಿ ಜನಪ್ರಿಯವಾಗಿವೆ.